| ಕ್ರ. ಸಂ. | ಫಸಲಿನ ರೂಡಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ / ವೇಳೆ | ಹರಾಜು ದಿನಾಂಕ ವೇಳೆ | ಟೆಂಡರ್ ಫಾರಂ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 3. | ಕನಕಪುರ ತಾಲ್ಲೂಕು, ಕನಕಪುರ ಭಾಗ–1, ತೋಕಸಂದ್ರ ಬೀಟ್, ಮರಳವಾಡಿ ಬೀಟ್, ತೇರುಬೀದಿ ಬೀಟ್, ಗೌಡಹಳ್ಳಿ ಬೀಟ್ (ರಾಮಸ್ವಾಮಿ ದೇವಸ್ಥಾನ ಪ್ರದೇಶ) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ | ದಿನಾಂಕ: 28–10–09 ಮಧ್ಯಾಹ್ನ 3.00 ರಿಂದ 3.30 ಗಂಟೆಯವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 09–11–09 ರಂದು ಮರು ಟೆಂಡರ್ ಹರಾಜು ಕಂ ಮಾಡಲಾಗುವುದು. | ದಿನಾಂಕ: 28–10–09 ಮಧ್ಯಾಹ್ನ 3.30 ಗಂಟೆಗೆ | ರೂ 5000/– ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಡ್ ಡ್ರಾಫ್ಟ್. |
| 4. | ಕನಕಪುರ ತಾಲ್ಲೂಕು, ಕನಕಪುರ ಭಾಗ–2, ರ ಕಾಡುಶಿವನಹಳ್ಳಿ ಬೀಟ್, ಹಂಚಿಗುಳಿ ಬೀಟ್, ಗೌಡಹಳ್ಳಿ ಭಾಗ (ಕಾಳೇಗೌಡನಹಳ್ಳಿ ಕೆರೆ ಪ್ರದೇಶ) | – " – | – " – | – " – | – " – |
| 5. | ಕನಕಪುರ ತಾಲ್ಲೂಕು, ಕನಕಪುರ ಭಾಗ–3, ಚವರ್‌ಕಲ್ ಬೀಟ್, ಮುಗ್ಗೂರು ಬೀಟ್ (ವನ್ಯಪ್ರಾಣಿ ವಿಭಾಗಕ್ಕೆ ಸೇರಿದ ಪ್ರದೇಶವನ್ನು ಬಿಟ್ಟು) ಕೋಟೆಕೊಪ್ಪ ಬೀಟ್ ದಿಂಬದಹಳ್ಳಿ ಬೀಟ್, ಮುನೇಶ್ವರ ಬೀಟ್ | – " – | – " – | – " – | – " – |
| 6. | ಕನಕಪುರ ತಾಲ್ಲೂಕು, ಕನಕಪುರ ಭಾಗ–4, ಮಂಜುನಾಥ್ ಬೀಟ್, ರಾಮದೇವರ ಬೆಟ್ಟ ಬೀಟ್, ಗರಳಾಪುರ ಬೀಟ್, ನಾರಾಯಣಪುರ ಬೀಟ್ | – " – | – " – | – " – | – " – |

| ಕ್ರ. ಸಂ. | ಫಸಲಿನ ರೂಡಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ / ವೇಳೆ | ಹರಾಜು ದಿನಾಂಕ ವೇಳೆ | ಟೆಂಡರ್ ಫಾರಂ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 7. | ಮಾಗಡಿ ತಾಲ್ಲೂಕು ಸಾವನದುರ್ಗ ಸ್ಟೇಟ್ ಫಾರೆಸ್ಟ್‌ನಲ್ಲಿ ಅರಣ್ಯ ಕೃಷಿಕರು ಮಾಡುತ್ತಿದ್ದ 35 ಹುಣಸೆಮರ ಸೇರಿ (280 ಹೆಕ್ಟೇರ್ ಎಂ.ಪಿ.ಸಿ.ಎ, 300 ಹೆಕ್ಟೇರ್ ಎ.ಎಫ್.ಸಿ ಪ್ರದೇಶ ಬಿಟ್ಟು) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ | ದಿನಾಂಕ: 28–10–09 ಮಧ್ಯಾಹ್ನ 3.00 ರಿಂದ 3.30 ಗಂಟೆಯವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 09–11–09 ರಂದು ಮರು ಟೆಂಡರ್ ಹರಾಜು ಕಂ ಮಾಡಲಾಗುವುದು. | ದಿನಾಂಕ: 28–10–09 ಮಧ್ಯಾಹ್ನ 3.30 ಗಂಟೆಗೆ | ರೂ 5000/– ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಡ್ ಡ್ರಾಫ್ಟ್. |
| 8. | ಸಾತನೂರು ವಲಯ (ಹುಲಿಯಾ ಕಾಲೋನಿಯ 125 ಎಕರೆ ಹಾಗೂ ಕಾವೇರಿ ವನ್ಯಪ್ರಾಣಿ ವಿಭಾಗ ಮತ್ತು ಬನ್ನೇರುಘಟ್ಟ ನ್ಯಾಷನಲ್ ಪಾರ್ಕ್‌ನ ಪ್ರದೇಶಗಳು ಹಾಗೂ ನೆಹರುದೊಡ್ಡಿ, ಗಾಂಧಿ ಗ್ರಾಮದ ಅಚಲು ಅರಣ್ಯದಲ್ಲಿರುವ 125 ಹುಣಸೆ ಮರಗಳನ್ನು ಬಿಟ್ಟು) | – " – | – " – | – " – | – " – |

**IV). ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಬದಿಯಲ್ಲಿರುವ ಹುಣಸೆ ಫಸಲು**

| | | | | | |
|---|---|---|---|---|---|
| 1. | ಮಾಗಡಿ ತಾಲ್ಲೂಕು (ರಾಷ್ಟ್ರೀಯ ಹೆದ್ದಾರಿ ಬಿಟ್ಟು ಮಾಗಡಿ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | – " – | – " – | – " – | – " – |
| 2. | ಚನ್ನಪಟ್ಟಣ ತಾಲ್ಲೂಕು (ಚನ್ನಪಟ್ಟಣ ತಾಲ್ಲೂಕಿನಲ್ಲಿ ಬರುವ ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ ಮತ್ತು ಇದರ ಸರಹದ್ದಿನಲ್ಲಿ ಬರುವ ಮುಖ್ಯ ರಸ್ತೆಗಳು) | – " – | – " – | – " – | – " – |

| ಕ್ರ. ಸಂ. | ಫಸಲಿನ ರೂಡಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ / ವೇಳೆ | ಹರಾಜು ದಿನಾಂಕ ವೇಳೆ | ಟೆಂಡರ್ ಫಾರಂ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 3. | ಕನಕಪುರ ತಾಲ್ಲೂಕು, (ಕನಕಪುರ, ಬೆಂಗಳೂರು ರಾಜ್ಯ ಹೆದ್ದಾರಿ ಹಾಗೂ ಕನಕಪುರ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಜಿಲ್ಲಾ ಮುಖ್ಯ ರಸ್ತೆಗಳು) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ | ದಿನಾಂಕ: 28–10–09 ಮಧ್ಯಾಹ್ನ 3.00 ರಿಂದ 3.30 ಗಂಟೆಯವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 09–11–09 ರಂದು ಮರು ಟೆಂಡರ್ ಹರಾಜು ಕಂ ಮಾಡಲಾಗುವುದು. | ದಿನಾಂಕ: 28–10–09 ಮಧ್ಯಾಹ್ನ 3.30 ಗಂಟೆಗೆ | ರೂ 5000/– ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಡ್ ಡ್ರಾಫ್ಟ್. |
| ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 209 ಕಿ.ಮೀ. 30 ರಿಂದ 86 ಕಿ.ಮೀ. ವರೆಗೆ ಮತ್ತು ಕನಕಪುರ ಸಾತನೂರು ಪಟ್ಟಣಗಳ ಮೇಲೆ ಹಾದು ಹೋಗುವ ಮಾರ್ಗದಲ್ಲಿರುವ ರಸ್ತೆ ಬದಿಯ ಹುಣಸೆ ಮರಗಳನ್ನು ಹೊರತುಪಡಿಸಿ) | | | | | |
| 4. | ರಾಮನಗರ ತಾಲ್ಲೂಕು (ರಾಮನಗರ ತಾಲ್ಲೂಕಿನಲ್ಲಿ ಬರುವ ಬೆಂಗಳೂರು – ಮೈಸೂರು ರಾಜ್ಯ ಹೆದ್ದಾರಿ ಮತ್ತು ಇದರ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | – " – | – " – | – " – | – " – |

**V). ಕಿರು ಅರಣ್ಯ ಉತ್ಪನ್ನ ಅಂದರೆ ಬೇಲ, ನೆಲ್ಲಿ**

| | | | | | |
|---|---|---|---|---|---|
| 1 | ಕನಕಪುರ ತಾಲ್ಲೂಕು | – " – | – " – | – " – | – " – |
| 2 | ಮಾಗಡಿ ತಾಲ್ಲೂಕು ಸಾವನದುರ್ಗ ಸ್ಟೇಟ್ ಫಾರೆಸ್ಟ್‌ನಲ್ಲಿ ಸಂಶೋಧನಾ ಉದ್ದೇಶಕ್ಕಾಗಿ ಕಾಯ್ದಿರಿಸಿದ ಬೀಜಗಳನ್ನು ಸಂಗ್ರಹಿಸಲು ಅರಣ್ಯ ಕೃಷಿಕರು ಕೇಂದ್ರ ವಲಯ ಬೆಂಗಳೂರು ಇವರಿಗೆ ಕಾಯ್ದಿರಿಸಿದ ಮರಗಳು ಸೇರಿಕೊಂಡಿರುತ್ತವೆ. ಗ್ರಾಮ ಅರಣ್ಯ ಸಮಿತಿಯ 300 ಹೆಕ್ಟೇರ್ ಪ್ರದೇಶ ಮತ್ತು 280 ಹೆಕ್ಟೇರ್ ಎಂ.ಪಿ.ಸಿ.ಎ. ಹಾಗೂ ಎಂ.ಪಿ.ಡಿ.ಎ. ಪ್ರದೇಶಗಳನ್ನು ಹೊರತುಪಡಿಸಿದೆ. | – " – | – " – | – " – | – " – |

| ಕ್ರ. ಸಂ. | ಫಸಲಿನ ರೂಡಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ / ವೇಳೆ | ಹರಾಜು ದಿನಾಂಕ ವೇಳೆ | ಟೆಂಡರ್ ಫಾರಂ ಲಗತ್ತಿಸಬೇಕಾದ ಠೇವಣಿ / ಹರಾಜಿನ ಹಣ |
|---|---|---|---|---|---|
| 3. | ಸಾತನೂರು ವಲಯ (ಹುಲಿಯಾ ಕಾಲೋನಿಯ 125 ಎಕರೆ ಹಾಗೂ ಕಾವೇರಿ ವನ್ಯಪ್ರಾಣಿ ವಿಭಾಗ ಮತ್ತು ಬನ್ನೇರುಘಟ್ಟ ನ್ಯಾಷನಲ್ ಪಾರ್ಕ್‌ನ ಪ್ರದೇಶಗಳು ಹಾಗೂ ನೆಹರುದೊಡ್ಡಿ, ಗಾಂಧಿ ಗ್ರಾಮದ ಅಚಲು ಅರಣ್ಯದಲ್ಲಿರುವ 125 ಹುಣಸೆ ಮರಗಳನ್ನು ಬಿಟ್ಟು) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ | ದಿನಾಂಕ: 28–10–09 ಮಧ್ಯಾಹ್ನ 3.00 ರಿಂದ 3.30 ಗಂಟೆಯವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 09–11–09 ರಂದು ಮರು ಟೆಂಡರ್ ಹರಾಜು ಕಂ ಮಾಡಲಾಗುವುದು. | ದಿನಾಂಕ: 28–10–09 ಮಧ್ಯಾಹ್ನ 3.30 ಗಂಟೆಗೆ | ರೂ 5000/– ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್. |
| 4. | ರಾಮನಗರ ತಾಲ್ಲೂಕು (ಕೂಟಗಲ್ ಕಿರು ಅರಣ್ಯ ಹೊರತುಪಡಿಸಿದೆ) | – “ – | – “ – | – “ – | – “ – |
| 5. | ಚನ್ನಪಟ್ಟಣ ತಾಲ್ಲೂಕು | – “ – | – “ – | – “ – | – “ – |

**ಷರತ್ತುಗಳು**

1. ರೂ. 200/– ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡಿ ದಿನಾಂಕ: 28–10–2009 ಮದ್ಯಾಹ್ನ 1.00 ಗಂಟೆಯವರೆಗೆ ರಾಮನಗರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಇವರಿಂದ ಟೆಂಡರ್ ಫಾರಂ ಪಡೆಯಬಹುದು. ಭರ್ತಿ ಮಾಡಿದ ಫಾರಂ ಮೇಲೆ ರೂ. 2.00 ಕೋರ್ಟ್ ಫೀ ಸ್ಟಾಂಪ್‌ನ್ನು ಅಂಟಿಸತಕ್ಕದ್ದು. ಹಾಗೆಯೇ ಟೆಂಡರ್ ಫಾರಂನ ಜೊತೆ 5000/– (ಐದು ಸಾವಿರ) ಮೊಬಲಗಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ.ಯನ್ನು ಪ್ರತಿ ಟೆಂಡರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರ ಹೆಸರಿನಲ್ಲಿ ತೆಗೆದು ಇ.ಎಂ.ಡಿ.ಯಾಗಿ ಲಗತ್ತಿಸತಕ್ಕದ್ದು. ಹಾಗೆಯೇ ಈ ಹರಾಜಿನಲ್ಲಿ ಭಾಗವಹಿಸುವವರು ಸಹಾ ರೂ. 5000/– (ಐದುಸಾವಿರ) ಗಳನ್ನು ನಗದು ರೂಪದಲ್ಲಿ ಇ.ಎಂ.ಡಿ. ಯನ್ನು ಹರಾಜಿಗೆ ಮುನ್ನ ಕೊಡತಕ್ಕದ್ದು.
2. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗದಲ್ಲಿ 2009–10ನೇ ಸಾಲಿಗೆ ನೋಂದಾಯಿಸಿದ ಹಾಗೂ ಅರ್ಹತೆ ಪಡೆದಿರುವ ಅರಣ್ಯ ಗುತ್ತಿಗೆದಾರರಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿದೆ.
3. ಹಿಂದಿನ ಹರಾಜಿನಲ್ಲಿ ಪಡೆದ ಫಸಲಿನ ಬಾಬ್ತು ಯಾವುದೇ ಹಣ ಬಾಕಿಯಿರುವ ಗುತ್ತಿಗೆದಾರರು ಮೇಲಿನ ಟೆಂಡರ್ / ಹರಾಜಿನಲ್ಲಿ ಭಾಗವಹಿಸುವುದಕ್ಕೆ ಅವಕಾಶವಿರುವುದಿಲ್ಲ.
4. ಬ್ಲಾಕ್ ಲೀಸ್ಟ್ ಆಗಿರುವವರು, ಇನ್‌ಸಾಲ್ವೆಂಟ್, ಡಿಫಾಲ್ಟರ್ಸ್ ಆದವರು ಮತ್ತು ಮೈನರ್ಸ್ ಟೆಂಡರ್ ಸಲ್ಲಿಸುವುದಕ್ಕಾಗಲೀ ಅಥವಾ ಭಾಗವಹಿಸುವುದಕ್ಕೆ ಅರ್ಹರಾಗಿರುವುದಿಲ್ಲ.
5. ಈ ಹರಾಜಿನ ಟೆಂಡರ್‌ಗಳನ್ನಾಗಲೀ, ಹರಾಜನ್ನಾಗಲೀ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
6. ಒಪ್ಪಿಕೊಳ್ಳಲಾಗದ ಟೆಂಡರ್ ಹರಾಜಿನ 1/2 ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಟೆಂಡರ್ – ಕಂ – ಹರಾಜು ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ 1/2 ಭಾಗ ಹಣವನ್ನು ಕರಾರು ಮಾಡಿಕೊಡುವ ದಿನ ಅಥವಾ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇಂ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೇ ಯೂನಿಟ್‌ನ್ನು ಅವರ ಜವಾಬ್ದಾರಿಯಲ್ಲಿ ಹರಾಜು ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ 109 ರ

ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಹಾಗೂ ಸಾಮಗ್ರಿಗಳ ಮಾರಾಟ ಶಾಸನ ಕಾಯ್ದೆ ಸೆಕ್ಷನ್ 54(4) ರ ಪ್ರಕಾರ ಅಥವಾ ನಾಗರೀಕ ನಿಯಮಾವಳಿಗಳ ಪ್ರಕಾರ ಕ್ರಮ ಕೈಗೊಳ್ಳಲಾಗುವುದು.

7. ಕರ್ನಾಟಕ ರಾಜ್ಯದಲ್ಲಿಯ ಸವಾಲುದಾರರನ್ನು ಹೊರತುಪಡಿಸಿ, ಅಥವಾ ಯಾವುದೇ ತರಹದ ಆಸ್ತಿಯು ಕರ್ನಾಟಕ ರಾಜ್ಯದಲ್ಲಿ ಇಲ್ಲದಂಥ ಸವಾಲುದಾರರು ಸವಾಲಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ಸವಾಲು ಮಾಡುವ ಅಧಿಕಾರಿಗೆ ತಮ್ಮ ಸವಾಲಿನ ಅರ್ಧ ರಕಂನ್ನು ಜಾರಿಯಲ್ಲಿರುವ ಮಾರಾಟ ಕರ ಮತ್ತು ಅರಣ್ಯಾಭಿವೃದ್ಧಿ ಕರ ಕೊಡಬೇಕು. ಸದರಿ ರಕಂ ಮುಂದಿನ 100/– ರೂಗೆ ಸರಿ ಇರಬೇಕು ಮೇಲೆ ವಿವರಿಸಿದಂತೆ ಯಶಸ್ವಿ ಸವಾಲುದಾರನ್ನು ಶೇ. 50 ಸವಾಲಿನ ರಕಂ ಕಟ್ಟಿದಲ್ಲಿ ಉಳಿದ ಶೇ. 50 ರಕಂ ಚಾಲ್ತಿಯಲ್ಲಿರುವ ಎಲ್ಲಾ ಕರಗಳನ್ನು ಪಾವತಿ ಮಾಡತಕ್ಕದ್ದು ಶೇ 50 ಉಳಿದ ಹಣವನ್ನು ಕರಾರುನಾಮೆ ಸಹಿ ಮಾಡುವುದಕ್ಕಿಂತ ಪೂರ್ವದಲ್ಲಿ ಪಾವತಿ ಮಾಡಬೇಕಾಗುವುದು.

8. ಟೆಂಡರ್‌ದಾರರು ಟೆಂಡರ್ ಫಾರಂನಲ್ಲಿ ಅಥವಾ ಹರಾಜನ್ನು ನಡೆಸುವ ಅಧಿಕಾರಿಯ ಬಳಿ ನೀಡುವ ವಿಳಾಸವೇ ಅಂತಿಮ ಈ ವಿಳಾಸಕ್ಕೆ ಅಂಚೆ ದೃಢೀಕರಣ ಪತ್ರ ಪಡೆದು ಕಳಿಸಿದ ಪತ್ರವು ಟೆಂಡರ್‌ದಾರರಿಗೆ ತಲುಪಿದೆ ಎಂದೇ ತಿಳಿಯಲಾಗುವುದು.

9. ಕಿರು ಅರಣ್ಯ ಉತ್ಪನ್ನದ ಯಾವುದೇ ಬಾಬ್ತನ್ನು ಹರಾಜು ಮಾಡದೇ ಹಿಂಪಡೆಯಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕು ಇರುತ್ತದೆ. ಈ ಸಂಬಂಧ ಟೆಂಡರುದಾರರಾಗಲಿ ಅಥವಾ ಹರಾಜಿನಲ್ಲಿ ಭಾಗವಹಿಸಿದವರಾಗಲೀ ಯಾವುದೇ ಯಾವುದೇ ಪರಿಹಾರ ಧನವನ್ನು ಹಾಗೆ ಹಿಂಪಡೆದ ಹರಾಜಿನ ಬಾಬ್ತು ಕ್ಲೈಮ್ ಮಾಡುವ ಹಕ್ಕು ಇರುವುದಿಲ್ಲ.

10. ಟೆಂಡರುದಾರರು ಟೆಂಡರನ್ನು ಸೀಲು ಮಾಡಿದ ಲಕೋಟೆಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರಿಗೆ ವಿಳಾಸಿಸಿ ಟೆಂಡರು ಪೆಟ್ಟಿಗೆಗೆ ಹಾಕಬೇಕು. ಎಲ್ಲಾ ಟೆಂಡರುಗಳನ್ನು ಗೋಪ್ಯವಾಗಿ ಇಡಲಾಗುವುದು.

11. ಟೆಂಡರ್ ಲಕೋಟೆ ಮೇಲೆ...................................................... ಇಂತಹ ಬಾಬ್ತುಗಾಗಿ ಟೆಂಡರು ಎಂದು ನಮೂದಿಸಬೇಕು. ಸಾಮಾನ್ಯವಾಗಿ ಒಬ್ಬ ಹೆಚ್ಚು ಟೆಂಡರುಗಳನ್ನು ಹಾಕಿದ್ದಲ್ಲಿ ಹೆಚ್ಚು ದರ ನಮೂದಿಸಿರುವ ಟೆಂಡರನ್ನು ಮಾತ್ರ ಪುರಸ್ಕರಿಸಿ ಉಳಿದ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

12. ಟೆಂಡರುಗಳನ್ನು ಟೆಂಡರಿಗಾಗಿಯೇ ಪ್ರತ್ಯೇಕವಾಗಿ ಇಟ್ಟಿರುವ ಪೆಟ್ಟಿಗೆಯಲ್ಲಿ ಹಾಕಬೇಕು. ಟೆಂಡರಿನಲ್ಲಿ ಷರತ್ತುಗಳನ್ನು ನಮೂದಿಸಿ ಹಾಕಬಾರದು ಒಂದು ವೇಳೆ ಷರತ್ತು ನಮೂದಿಸಿ ಟೆಂಡರು ಹಾಕಿದ್ದರೆ ಅಂತಹ ಟೆಂಡರುಗಳನ್ನು ತಿರಸ್ಕರಿಲಾಗುವುದು.

13. ಪ್ರತಿಯೊಂದು ಟೆಂಡರಿನ ಜೊತೆಯಲ್ಲಿ ಆದಾಯ ತೆರಿಗೆ ಪಾವತಿ ದೃಢೀಕರಣ ಪತ್ರ ಲಗತ್ತಿಸಬೇಕು.

14. ಮುಂಗಡ ಠೇವಣಿಯನ್ನು ಲಗತ್ತಿಸದೇ ಹಾಕಿರುವ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

15. ಟೆಂಡರುದಾರರು ಹರಾಜಿನಲ್ಲೂ ಭಾಗವಹಿಸಲು ಅರ್ಹರಿರುತ್ತಾರೆ. ಠೇವಣಿಯನ್ನು ಕಟ್ಟದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

16. ಪ್ರತಿ ಯೂನಿಟ್‌ಗೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ಹೆಸರನ್ನು ದಾಖಲಿಸಿ ಅವರ ಸಹಿಯನ್ನು ಬಿಡ್ಡರ್ಸ್ ಪಟ್ಟಿಯಲ್ಲಿ ತೆಗೆದುಕೊಳ್ಳಲಾಗುವುದು ಅನಂತರ ಯಾವುದೇ ಬಿಡ್ಡನ್ನು ಅಂಗೀಕರಿಸುವುದಿಲ್ಲ.

17. ಒಂದು ವೇಳೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ದರವನ್ನು ಹರಾಜು ನಡೆಸುವ ಅಧಿಕಾರಿ ತಿರಸ್ಕರಿಸದಲ್ಲಿ ನಂತರ ಅತಿ ಹೆಚ್ಚು ಬಿಡ್ಡು ಮಾಡಿರುವವರ ಬಿಡ್ಡನ್ನು ಅಧಿಕಾರಿಯು ಒಪ್ಪಬಹುದು ಅಥವಾ ಮರು ಹರಾಜು ಮಾಡಬಹುದು.

18. ಬಿಡ್ಡುದಾರರು ಬಿಡ್ಡನ್ನು ಒಪ್ಪಿದಲ್ಲಿ ಬಿಡ್ಡುದಾರರು ಇ.ಎಂ.ಡಿ. ಜೊತೆಗೆ ಪುನಃ ಹರಾಜಿನ ಮೊತ್ತದ ಶೇ. 2ರ ಭಾಗವನ್ನು ಠೇವಣಿಯಾಗಿ ಇಡಬೇಕು.

19. ವಿಫಲ ಟೆಂಡರುದಾರರ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂತಿರುಗಿಸಲಾಗುವುದು.

20. ಒಂದು ವೇಳೆ ಬಿಡ್‌ದಾರರು ನಮೂದಿಸಿರುವ ಹಣವನ್ನು ಮೇಲಾಧಿಕಾರಿಗಳು ತಿರಸ್ಕರಿಸಿದಲ್ಲಿ ಅವರು ಕಟ್ಟಿರುವ ಹಣವನ್ನು ತಕ್ಷಣವೇ ಹಿಂತಿರುಗಿಸಲಾಗುವುದು.

21. ಯಶಸ್ವಿ ಟೆಂಡರುದಾರರಿಗೆ ಅವರ ಟೆಂಡರು ಒಪ್ಪಿಗೆಯಾಗಿರುವ ಬಗ್ಗೆ ನೋಂದಾಯಿತ ಅಂಚೆಯ ಮೂಲಕ ಮಾಹಿತಿ ನೀಡಲಾಗುವುದು ಹಾಗೂ ಕಛೇರಿ ಸೂಚನಾ ಫಲಕದಲ್ಲೂ ಅವರ ಹೆಸರನ್ನು ನಮೂದಿಸಲಾಗುವುದು. ಈ ರೀತಿ ಮಾಡಿದ ನಂತರ ಟೆಂಡರ್‌ದಾರರಿಗೆ ಅದರ ಒಪ್ಪಿಗೆಯ ಬಗ್ಗೆ ಮಾಹಿತಿ ನೀಡಲಾಗಿದೆ ಎಂದು ಭಾವಿಸಲಾಗುವುದು.

22. ಟೆಂಡರು ಸ್ವೀಕೃತವಾದ ಮಾಹಿತಿ ತಲುಪಿದ 15 ದಿನಗಳಲ್ಲಿ ಟೆಂಡರುದಾರರು ಸಂಬಂಧಿಸಿದ ಘಟಕಗಳ ಅಧಿಕಾರಿಯವರ ಜೊತೆ ಪ್ರತ್ಯೇಕವಾಗಿ ಒಪ್ಪಂದ ಮಾಡಿಕೊಳ್ಳಬೇಕು.

23. ಉಳಿಕೆ ಹಣವನ್ನು ಕಟ್ಟುವಲ್ಲಿ ಟೆಂಡರುದಾರರು ಯಶಸ್ವಿಯಾಗದಿದ್ದಲ್ಲಿ ಅವರ ಟೆಂಡರ್‌ನ್ನು ಕೂಡಲೇ ಸ್ಥಗಿತಗೊಳಿಸಲಾಗುವುದು ಒಂದು ವೇಳೆ ಮಾರಾಟ ಬೆಲೆ ಕಂತುಗಳು ಮತ್ತು ಬಡ್ಡಿಯ ಕಂತುಗಳನ್ನು ಒಂದು ತಿಂಗಳಿಗೂ ಹೆಚ್ಚು ಅವಧಿಗೆ ಕಟ್ಟದಿದ್ದರೆ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

24. ಟೆಂಡರುದಾರರು ವಿಭಾಗೀಯ ಅಧಿಕಾರಿಗಳಿಗೆ ಆಗಿಂದಾಗ್ಯೆ ಅವರು ನೇಮಿಸಿಕೊಂಡಿರುವ ಕೆಲಸಗಾರರ ಹೆಸರು ಮತ್ತು ವಿಳಾಸವನ್ನು ವಿಭಾಗೀಯ ಅಧಿಕಾರಿಗಳಿಗೆ ಸಲ್ಲಿಸುವುದು.
25. ಬೆಳೆಯ ಸಂಗ್ರಹಣೆ ಕೆಲಸವನ್ನು ಮಾಡುವ ಪ್ರತಿಯೊಂದು ನೌಕರರ ಹೆಸರನ್ನು ಗುತ್ತಿಗೆದಾರರು ಅಥವಾ ಅವರಿಂದ ನೇಮಿಸಲ್ಪಟ್ಟ ಪ್ರತಿನಿಧಿಗಳಿಂದ ಲಿಖಿತ ಅನುಮತಿಯನ್ನು ತರಬೇಕು.
26. ಅರಣ್ಯ ಇಲಾಖೆಯ ನೌಕರರನ್ನು ವಲಯ ಅರಣ್ಯಾಧಿಕಾರಿಗಳ ಅನುಮತಿಯೊಂದಿಗೆ ಮಾತ್ರ ಕೆಲಸಕ್ಕೆ ತೆಗೆದುಕೊಳ್ಳುವುದು.
27. ಬೆಳೆಯನ್ನು ತೆಗೆಯುವ ಕಾಲದಲ್ಲಿ ಗುತ್ತಿಗೆದಾರರು / ನೌಕರರು ಅವರ ನಡುವಳಿಕೆಗೆ ಮತ್ತು ಕೆಲಸದಲ್ಲಿ ನಿರತವಾದ ಎಲ್ಲಾ ನೌಕರರ ನಡವಳಿಕೆಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.
28. ಪ್ರತಿಯೊಬ್ಬ ಖರೀದಿದಾರರು ಪ್ರತಿ ಮಾಹೆಯಲ್ಲಿ ಅವರು ತೆಗೆದ ಉತ್ಪನ್ನದ ಪ್ರಮಾಣದ ಬಗ್ಗೆ ಲೆಕ್ಕ ನೀಡಬೇಕು.
29. ಟೆಂಡರುದಾರರು ಅವರು ಪಡೆದ ಗುತ್ತಿಗೆಯನ್ನು ಯಾರಿಗೂ ಹಸ್ತಾಂತರಿಸುವ ಹಾಗಿಲ್ಲ.
30. ಗುತ್ತಿಗೆದಾರರು ಕೆಲಸಕ್ಕೆ ನೇಮಿಸಿಕೊಂಡ ನೌಕರರಿಗೆ ಏನಾದರೂ ಹಾನಿಯಾದಲ್ಲಿ ಅದನ್ನು ಗುತ್ತಿಗೆದಾರರೇ ಭರಿಸತಕ್ಕದ್ದು.
31. ಗುತ್ತಿಗೆಯ ಅವಧಿಯನ್ನು ಒಂದು ನಿಶ್ಚಿತ ಅವಧಿಗೆ ಮಾಡಿದ್ದು ಯಾವುದೇ ಕಾರಣಕ್ಕೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಗುತ್ತಿಗೆಯ ಅವಧಿಯು ಮುಗಿಯುವುದರೊಳಗೆ ಗುತ್ತಿಗೆದಾರರು ಉತ್ಪನ್ನಗಳನ್ನು ತೆಗೆಯತಕ್ಕದ್ದು.
32. ಗುತ್ತಿಗೆದಾರರು ಎಲ್ಲಾ ಸಮಯದಲ್ಲೂ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಇತರೆ ಶಾಸನಬದ್ಧ ಮಾರ್ಪಾಟುಗಳಿಗೆ ಬದ್ಧರಾಗಿರುತ್ತಾರೆ.
33. ಗುತ್ತಿಗೆದಾರರು ಟೆಂಡರು ಷರತ್ತಿನ ಯಾವುದೇ ಅಂಶಗಳನ್ನು ಉಲ್ಲಂಘನೆ ಮಾಡಿದಲ್ಲಿ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
34. ಮೇಲ್ಕಂಡ ಟೆಂಡರ್ ಹರಾಜಿನಲ್ಲಿ ಭಾಗವಹಿಸುವ ಮುನ್ನ ಅರಣ್ಯ ಗುತ್ತಿಗೆದಾರರು ಆಯಾಯ ತಾಲ್ಲೂಕಿನ ವಲಯ ಅರಣ್ಯಾಧಿಕಾರಿಯವರನ್ನು ಸಂಪರ್ಕಿಸಿ ಫಸಲನ್ನು ನೋಡಲು ಅನುಮತಿ ಪಡೆದು ಫಸಲನ್ನು ಪರಿಶೀಲಿಸಿಕೊಳ್ಳಬೇಕು.
35. ಈ ಟೆಂಡರ್–ಕಂ–ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.
36. ಟೆಂಡರ್–ಕಂ–ಹರಾಜಿನಲ್ಲಿ ಯಶಸ್ವಿಯಾದ ಟೆಂಡರ್ / ಹರಾಜಿಗೆ ಅರಣ್ಯ ಗುತ್ತಿಗೆದಾರರಿಗೆ ಸದರಿ ಪ್ರದೇಶದ ಬೆಳೆಯನ್ನು ತೆಗೆಯಲು ಟೆಂಡರ್ ಹರಾಜು ಸಂಬಂಧಿಸಿದ ಅಧಿಕಾರಿಗಳಿಂದ ದೃಢೀಕೃತವಾದ ನಂತರ ಹಾಗೂ ಸದರಿ ಗುತ್ತಿಗೆದಾರರು ನಿಗದಿತ ಛಾಪಾ ಕಾಗದದ ಮೇಲೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರೊಂದಿಗೆ ಕರಾರು ಮಾಡಿಕೊಂಡ ಮೇಲೆ ಅನುಮತಿ ನೀಡಲಾಗುವುದು.
37. ಪ್ರತಿ ತಾಲ್ಲೂಕಿಗೆ ಬೇರೆ ಬೇರೆ ಟೆಂಡರ್ ಫಾರಂನ್ನು ನಿಗದಿತ ಇ.ಎಂ.ಡಿ ಲಗತ್ತಿಸಿ ಉಪಯೋಗಿಸಬೇಕು.
38. ಟೆಂಡರ್ ಕಂ ಹರಾಜನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಅಥವಾ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಮರು ಟೆಂಡರ್ ಕಂ ಹರಾಜನ್ನು ದಿನಾಂಕ: 09–11–2009 ರಂದು ನಡೆಸಲಾಗುವುದು ಹಾಗೂ ಮರು ಟೆಂಡರ್ ಕಂ ಹರಾಜಿಗೆ ಪುನಃ ಯಾವುದೇ ರೀತಿಯ ಪ್ರಕಟಣೆಯನ್ನು ನೀಡಲಾಗುವುದಿಲ್ಲ.

**ವಿ. ಗೀತಾಂಜಲಿ**

ಪಿ.ಆರ್. 879 ಉಪ ಅರಣ್ಯ ಸಂರಕ್ಷಣಾಧಿಕಾರಿ,

ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರ ಕಛೇರಿ

### ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ : ಎ6/ಉಅಸಂ/ಟಿಂಬರ್/ಸಿಆರ್–33/2009–10, ದಿನಾಂಕ: 26ನೇ ಸೆಪ್ಟೆಂಬರ್ 2009**

**ವಿಷಯ:** ರಾಮನಗರ ಪ್ರಾದೇಶಿಕ ವಿಭಾಗಕ್ಕೆ ಸೇರಿದ ವಿವಿಧ ನೆಡುತೋಪಿನಲ್ಲಿ ಕಡಿದು ಲಾಟ್ ಮಾಡಿರುವ ನೀಲಗಿರಿ ಟಿಂಬರ್ ಲಾಗ್ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ರಾಮನಗರ ಪ್ರಾದೇಶಿಕ ಅರಣ್ಯ ವಿಭಾಗದ ಚನ್ನಪಟ್ಟಣ ವಲಯದ ವಿವಿಧ ನೆಡುತೋಪುಗಳಲ್ಲಿ ಕರ್ನಾಟಕ ಅರಣ್ಯ ಕೈಗಾರಿಕಾ ನಿಗಮ, ಬೆಂಗಳೂರು ಇವರ ವತಿಯಿಂದ ಕತ್ರಾವಣೆ ಮಾಡಿ ಇಲಾಖೆಗೆ ಹಸ್ತಾಂತರಿಸಿದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪರಿಮಾಣದ ನೀಲಗಿರಿ ಮರಗಳಿಂದ ಲಭ್ಯವಾದ ಟಿಂಬರ್ ಲಾಟ್ ಮಾಡಿದ್ದು ಇವುಗಳನ್ನು ಬಹಿರಂಗ ಹರಾಜು ಮೂಲಕ ಕೆಳಕಂಡ ಸ್ಥಳ ಹಾಗೂ ದಿನಾಂಕದಂದು ಈ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಿ ಪ್ರಕಟಣೆ ಹೊರಡಿಸಲಾಗಿದೆ. ಇಚ್ಚೆಯುಳ್ಳ ಖರೀದಿದಾರರು ಹರಾಜಿನಲ್ಲಿ ಭಾಗವಹಿಸಿ ಈ ಕೆಳಕಂಡ ಷರತ್ತುಗೊಳಪಟ್ಟು ಉತ್ಪನ್ನವನ್ನು ಖರೀದಿಸಬಹುದಾಗಿರುತ್ತದೆ.

**ಷೆಡ್ಯೂಲ್**

| ಕ. ಸಂ | ವಲಯ | ಹರಾಜಿಗೆ ಇಡಲಾಗಿರುವ ಉತ್ಪನ್ನದ ವಿವರಗಳು | ಅಂದಾಜು ಪರಿಮಾಣ | ಹರಾಜು ದಿನಾಂಕ ಮತ್ತು ವೇಳೆ | ಹರಾಜು ನಡೆಯುವ ಸ್ಥಳ |
|---|---|---|---|---|---|
| 1 | ಚನ್ನಪಟ್ಟಣ | ನೀಲಗಿರಿ ನಾಟಾ | 47.00 ಘಮೀ | ದಿ: 03–11–2009 ಬೆಳಿಗ್ಗೆ 11.00 ಗಂಟೆಗೆ | ಕೆಂಗಲ್ ನರ್ಸರಿ, ಹನುಮಂತಪುರ |

**ಷರತ್ತುಗಳು**

1. ಆಸಕ್ತ ಖರೀದಿದಾರರು ಈ ಕೆಳಗೆ ನಮೂದಿಸಿದ ಪ್ರಮಾಣದಲ್ಲಿ ಇಂಎಂಡಿ ಮೊತ್ತವನ್ನು ರಾಷ್ಟ್ರೀಕೃತ ಅಥವಾ ಲೋಕಲ್ ಷೆಡ್ಯೂಲ್ ಬ್ಯಾಂಕುಗಳ ಡಿಮಾಂಡ್ ಡ್ರಾಫ್ಟನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಪದನಾಮದಲ್ಲಿ ತೆಗೆದು ಸವಾಲಿನ ಪೂರ್ವದಲ್ಲಿ ನಡೆಸುವ ಅಧಿಕಾರಿಗಳ ಬಳಿಯಲ್ಲಿ ನೀಡಬೇಕು, ಹೀಗೆ ನೀಡಲಾದ ಇಎಂಡಿ ಮೊತ್ತವನ್ನು ಯಶಸ್ವಿ ಬಿಡ್ಡುದಾರರು ಖರೀದಿಸಲಾಗುವ ಮರಮುಟ್ಟುಗಳ ಮೌಲ್ಯದ 1/2 ಭಾಗದ ಹಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
   ಇಎಂಡಿ ಮೊತ್ತ ರೂ. 25,000–00 (ಪ್ರತಿ ಲಾಟಿಗೆ)
2. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗಧಿತ ಸಮಯ ಮತ್ತು ದಿನಾಂಕದಂದು ಹರಾಜನ್ನು ನಡೆಸಲಾಗುವುದು. ಒಂದೊಮ್ಮೆ ಸದರಿ ದಿನದಂದು ಹರಾಜು ನಡೆಸಲು ಅನಿವಾರ್ಯ ಕಾರಣಗಳಿಂದ ಸಾದ್ಯವಾಗದಿದ್ದಲ್ಲಿ ಮರು ಹರಾಜನ್ನು ದಿನಾಂಕ: 12–11–2009 ರಂದು ಬೆಳಿಗ್ಗೆ 11.00 ಗಂಟೆಗೆ ನಡೆಸಲಾಗುವುದು.
3. ಇಡಿಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
4. ಲಾಟುಗಳಲ್ಲಿ ಒಳಗೊಂಡ ದಿಮ್ಮಿಗಳ ಸಂಖ್ಯೆ ಪರಿಮಾಣಗಳನ್ನು ಘ.ಮೀ.ಗಳಲ್ಲಿ ನಮೂದಿಸಲಾಗುವುದು. ಏಳೆಗಳಿದ್ದಲ್ಲಿ ಸಂಖ್ಯೆಗಳನ್ನು ನಮೂದಿಸಲಾಗುವುದು. ಖರೀದಿದಾರರ ಬೇಡಿಕೆಯು ಸಂಬಂಧಿಸಿದ ಲಾಟ್‌ನ ಮಾಲಿಗೆ ಮಾತ್ರ ಸೀಮಿತವಾಗಿರುತ್ತದೆ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ತಾವಣೆ ಮಾಡಿ ಲಾಟ್ ಮಾಡಿರುವ ನೀಲಗಿರಿ ಮರಗಳ ಲಾಗ್‌ಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪರಿಮಾಣಕ್ಕೆ ಷೆಡ್ಯೂಲ್‌ನಲ್ಲಿರುವ ಸ್ಥಳಗಳಲ್ಲಿ ಪ್ರತಿ ಲಾಟ್‌ನ್ನು ಪ್ರತ್ಯೇಕವಾಗಿ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್ಡುದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ಟಿಂಬರ್ ಲಾಗ್‌ಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್ಡುದಾರರು ವಲಯ ಅರಣ್ಯಾಧಿಕಾರಿ, ರಾಮನಗರ ಮತ್ತು ವಲಯ ಅರಣ್ಯಾಧಿಕಾರಿ, ಚನ್ನಪಟ್ಟಣ ಇವರಲ್ಲಿ ಜಮಾ ಮಾಡತಕ್ಕದ್ದು.
9. ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ಣ ತೆರಿಗೆಯನ್ನು ಅಂದರೆ ವ್ಯಾಟ್ **12.5%,** ಅರಣ್ಯ ಅಭಿವೃದ್ಧಿ ತೆರಿಗೆ **12%**, ಆದಾಯ ತೆರಿಗೆ **2.5%** ಮತ್ತು ಆದಾಯ ತೆರಿಗೆ ಮೇಲೆ ಸೆಸ್ **3%** ರಷ್ಟು ತೆರಿಗೆಗಳನ್ನು ಪಾವತಿಸಬೇಕು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್ಡುದಾರರನ್ನು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
11. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
12. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
13. ಯಾವುದೇ ತಂಟೆತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
14. ಯಶಸ್ವಿ ಬಿಡ್‌ದಾರರು ಹರಾಜು ಸ್ಥಿರೀಕರಣ ಆದೇಶ ಪಡೆದ 7 ದಿನಗಳೊಳಗಾಗಿ ನೀಲಗಿರಿ ಟಿಂಬರ್ ಲಾಗ್‌ಗಳನ್ನು ಬಾಕಿ ಇರುವ ಬಿಡ್‌ನ ಮೊತ್ತವನ್ನು ವಲಯ ಅರಣ್ಯಾಧಿಕಾರಿ, ರಾಮನಗರ ಹಾಗೂ ವಲಯ ಅರಣ್ಯಾಧಿಕಾರಿ, ಚನ್ನಪಟ್ಟಣ ಇವರಿಗೆ ಪಾವತಿಸಿ ನೀಲಗಿರಿ ಟಿಂಬರ್ ಲಾಗ್‌ಗಳನ್ನು ತೆಗೆದುಕೊಂಡು ಹೋಗತಕ್ಕದು ನಿಗಧಿತ ಅವಧಿಯಲ್ಲಿ ಟಿಂಬರ್‌ನ್ನು ಸಾಗಿಸದ ಪಕ್ಷದಲ್ಲಿ E.M.D. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ನೀಲಗಿರಿ ಟಿಂಬರ್‌ನ್ನು ಮರು ಹರಾಜು

ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ 1963 ರ ಅರಣ್ಯ ಕಾಯ್ದೆ ಸೆಕ್ಷನ್ 109 ರಂತೆ ಬಾಕಿಯನ್ನು ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸರಕು ಸಾಮಗ್ರಿಗಳ ಮಾರಾಟದ ಕಾನೂನಿನನ್ವಯ ಅಥವಾ ಭಾರತೀಯ ದಂಡ ಸಂಹಿತೆ (Civil procedure) ಅನ್ವಯ ಕ್ರಮ ಕೈಗೊಳ್ಳಲಾಗುವುದು.

15. ಈ ಹರಾಜನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
16. ಕರ್ನಾಟಕ ರಾಜ್ಯದಲ್ಲಿಯ ಸವಾಲುದಾರರನ್ನು ಹೊರತುಪಡಿಸಿ, ಅಥವಾ ಯಾವುದೇ ತರಹದ ಆಸ್ತಿಯು ಕರ್ನಾಟಕ ರಾಜ್ಯದಲ್ಲಿ ಇಲ್ಲದಂಥ ಸವಾಲುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ಹರಾಜು ಮಾಡುವ ಅಧಿಕಾರಿಗೆ ತಮ್ಮ ಬಿಡ್‌ನ ಅರ್ಧ ರಕಂನ್ನು ಜಾರಿಯಲ್ಲಿದ್ದ ಮಾರಾಟ ಕರ ಮತ್ತು ಅರಣ್ಯಾಭಿವೃದ್ಧಿ ಕರ ಕೊಡಬೇಕು. ಸದರಿ ರಕಂ ಮುಂದಿನ 100 ರೂಗೆ ಸರಿ ಇರಬೇಕು ಮೇಲೆ ವಿವರಿಸಿದಂತೆ ಯಶಸ್ವಿ ಬಿಡ್‌ದಾರರು ಶೇಕಡಾ 50 ಬಿಡ್‌ನ ರಕಂ ಕಟ್ಟಿದಲ್ಲಿ ಉಳಿದ ಶೇ 50 ರಕಂನ್ನು ಚಾಲ್ತಿಯಲ್ಲಿರುವ ಎಲ್ಲಾ ಕರಗಳೊಡನೆ ಪಾವತಿ ಮಾಡತಕ್ಕದ್ದು ಶೇ 50 ಉಳಿದ ಹಣವನ್ನು ಕರಾರುನಾಮೆ ಸಹಿ ಮಾಡುವುದಕ್ಕಿಂತ ಪೂರ್ವದಲ್ಲಿ ಪಾವತಿ ಮಾಡಬೇಕಾಗುವುದು.
17. ಬಿಡ್ಡುದಾರರು ಹರಾಜನ್ನು ನಡೆಸುವ ಅಧಿಕಾರಿಯ ಬಳಿ ನೀಡುವ ವಿಳಾಸವೇ ಅಂತಿಮ ಈ ವಿಳಾಸಕ್ಕೆ ಅಂಚೆ ದೃಢೀಕರಣ ಪತ್ರ ಪಡೆದು ಕಳುಹಿಸಿದ ಪತ್ರವು ಬಿಡ್ಡುದಾರರಿಗೆ ತಲುಪಿದೆ ಎಂದೇ ತಿಳಿಯಲಾಗುವುದು.
18. ಪ್ರತಿ ಲಾಟ್‌ಗೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ಹೆಸರನ್ನು ದಾಖಲಿಸಿ ಅವರ ಸಹಿಯನ್ನು ಬಿಡ್ಡರ್ಸ್ ಪಟ್ಟಿಯಲ್ಲಿ ತೆಗೆದುಕೊಳ್ಳಲಾಗುವುದು ಅನಂತರ ಯಾವುದೇ ಬಿಡ್ಡನ್ನು ಅಂಗೀಕರಿಸುವುದಿಲ್ಲ.
19. ಒಂದು ವೇಳೆ ಅತಿ ಹೆಚ್ಚು ಬಿಡ್ಡು ಮಾಡಿದ ಬಿಡ್ಡುದಾರರ ದರವನ್ನು ಹರಾಜು ನಡೆಸುವ ಅಧಿಕಾರಿ ತಿರಸ್ಕರಿಸಿದಲ್ಲಿ, ನಂತರದ ಅತಿ ಹೆಚ್ಚು ಬಿಡ್ಡು ಮಾಡಿರುವವರ ಬಿಡ್ಡನ್ನು ಅಧಿಕಾರಿಯು ಒಪ್ಪಬಹುದು ಅಥವಾ ಮರು ಹರಾಜು ಮಾಡಬಹುದು.
20. ಬಿಡ್ಡುದಾರರು ಬಿಡ್ಡನ್ನು ಒಪ್ಪಿದಲ್ಲಿ ಬಿಡ್ಡುದಾರರು E.M.D ಯ ಜೊತೆಗೆ ಪುನಃ ಹರಾಜಿನ ಮೊತ್ತದ ಶೇ. 2 ರ ಭಾಗವನ್ನು ಠೇವಣಿಯಾಗಿ ಇಡಬೇಕು.
21. ವಿಫಲರಾದ ಬಿಡ್‌ದಾರರ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂತಿರುಗಿಸಲಾಗುವುದು.
22. ಒಂದು ವೇಳೆ ಬಿಡ್‌ದಾರರು ನಮೂದಿಸಿರುವ ಹಣವನ್ನು ಮೇಲಾಧಿಕಾರಿಗಳು ತಿರಸ್ಕರಿಸಿದಲ್ಲಿ ಅವರು ಕಟ್ಟಿರುವ ಹಣವನ್ನು ತಕ್ಷಣವೇ ಹಿಂತಿರಿಗಿಸಲಾಗುವುದು.
23. ಯಶಸ್ವಿ ಹರಾಜುದಾರರಿಗೆ ಅವರ ಟೆಂಡರು ಒಪ್ಪಿಗೆಯಾಗಿರುವ ಬಗ್ಗೆ ನೋಂದಾಯಿತ ಅಂಚೆಯ ಮೂಲಕ ಮಾಹಿತಿ ನೀಡಲಾಗುವುದು ಹಾಗೂ ಕಛೇರಿ ಸೂಚನಾ ಫಲಕದಲ್ಲೂ ಅವರ ಹೆಸರನ್ನು ನಮೂದಿಸಲಾಗುವುದು, ಈ ರೀತಿ ಮಾಡಿದ ನಂತರ ಟೆಂಡರ್‌ದಾರರಿಗೆ ಅದರ ಒಪ್ಪಿಗೆಯ ಬಗ್ಗೆ ಮಾಹಿತಿ ನೀಡಲಾಗಿದೆ ಎಂದು ಭಾವಿಸಲಾಗುವುದು.
24. ಬಿಡ್ಡುದಾರರು ಎಲ್ಲಾ ಸಮಯದಲ್ಲೂ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಇತರೆ ಶಾಸನಬದ್ಧ ಮಾರ್ಪಾಟುಗಳಿಗೆ ಬದ್ಧರಾಗಿರುತ್ತಾರೆ.
25. ಬಿಡ್ಡುದಾರರು ಟೆಂಡರ್ ಷರತ್ತಿನ ಯಾವುದೇ ಅಂಶಗಳನ್ನು ಉಲ್ಲಂಘನೆ ಮಾಡಿದಲ್ಲಿ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
26. ಈ ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.

**ವಿ. ಗೀತಾಂಜಲಿ**

ಪಿ.ಆರ್. 880 ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್ ಪ್ರಕಟಣೆ (2ನೇ ಕರೆ)**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–2 ರ ಅನ್ವಯ ಗುತ್ತಿಗೆ ಆಹ್ವಾನ)**

**ಕ್ರ.ಸಂ.ಸನೀ.ವಿ.ಬೆಳಗಾವಿ/ಕಿ.ಇಂ./ಟೆಂಡರ್/2009–10/3300, ದಿನಾಂಕ: 5ನೇ ಅಕ್ಟೋಬರ್ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ" ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.

2. ದಿನಾಂಕ:29.10.09 ರಿಂದ 03.11.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದ್ದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.
4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 06.11.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.
5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–2)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು ಮೊತ್ತ (ರೂ.ಗಳಲ್ಲಿ ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಯರನಾಳ ಗ್ರಾಮದ ಹತ್ತಿರ ಇಂಗು ಕೆರೆ ನಿರ್ಮಾಣ | 39.20 | 78500/– | 4000+Tax | 6 ತಿಂಗಳು (ಮಳೆಗಾಲ ಸೇರಿ) |

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 866 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

### ಅಲ್ಪಾವಧಿ ಇ–ಟೆಂಡರ್ ಪ್ರಕಟಣೆ

**ನಂ:ಕಾಇಂ:ಲೋವಿ:ಚಿ:ಕಟ್ಟಡಗಳು:09:2009–10, ದಿನಾಂಕ: 5ನೇ ಅಕ್ಟೋಬರ್ 2009**

1) ಇ–ಟೆಂಡರ್ ಉಲ್ಲೇಖ: KPWD/2009-10/WORK_INDENT 1354

2) ಇ–ಟೆಂಡರ್ ಉಲ್ಲೇಖ: KPWD/2009-10/WORK_INDENT 1535

ಕರ್ನಾಟಕ ರಾಜ್ಯಪಾಲರ ಪರವಾಗಿ, 1ನೇ ದರ್ಜೆ ಗುತ್ತಿಗೆದಾರರಿಗೆ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ಟೆಂಡರ್ ಅನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ಕಾಮಗಾರಿ ವಿವರಗಳು ಈ ಕೆಳಗಿನಂತಿವೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ |
|---|---|---|---|
| 1 | ಚಳ್ಳಕೆರೆ ತಾಲ್ಲೂಕು ಚಳ್ಳಕೆರೆ ಪಟ್ಟಣದಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆ ಕಟ್ಟಡ (ನೆಲ ಅಂತಸ್ತು) ನಿರ್ಮಾಣ | 23940663–00 | 359110–00 |
| 2 | ಹೊಳಲ್ಕೆರೆ ತಾಲ್ಲೂಕು ಹೊಳಲ್ಕೆರೆ ಪಟ್ಟಣದಲ್ಲಿ ವಿ.ಐ.ಪಿ. ಗೆಸ್ಟ್ ಹೌಸ್ ನಿರ್ಮಾಣ | 9426941–13 | 188539–00 |

ಅರ್ಹ ಗುತ್ತಿಗೆದಾರರು ವೆಬ್‌ಸೈಟ್ www.eproc.Karnataka.gov.in/eportal/index.seam ನಲ್ಲಿ ಟೆಂಡರ್‌ಗಾಗಿ ಭಾಗವಹಿಸಬಹುದು ಹಾಗೂ ವಿವರಗಳನ್ನು ಪಡೆಯಬಹುದಾಗಿದೆ.

| | | |
|---|---|---|
| ಟೆಂಡರ್ ಬಗ್ಗೆ ವಿಚಾರಿಸಲು/ಮಾಹಿತಿ ಪಡೆಯಲು ಕೊನೆಯ ದಿನಾಂಕ | : | 21.10.2009 ಸಮಯ: 17.30 |
| ಟೆಂಡರ್ ಸಲ್ಲಿಸುವ ಅಂತಿಮ ದಿನಾಂಕ ಮತ್ತು ವೇಳೆ | : | 23.10.2009 ಸಮಯ: 16.00 |
| ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 27.10.2009 ಸಮಯ: 11.00 |
| ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 29.10.2009 ಸಮಯ: 11.00 |

**ಸೂಚನೆ:** ಈ ಮೇಲ್ಕಂಡ ಕಾಮಗಾರಿಗಳ ಮುಂದೆ ನಮೂದಿಸಿದ ಟೆಂಡರಿಗಿಟ್ಟ ಮೊತ್ತ ಮತ್ತು ಮುಂಗಡ ಹಣ ಠೇವಣಿ (ಇ.ಎಂ.ಡಿ) ಯಲ್ಲಿ ಯಾವುದೇ ಬದಲಾವಣೆ ಇದ್ದಲ್ಲಿ ಇ-ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಬಿಡ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಟೆಂಡರಿಗಿಟ್ಟ ಮೊತ್ತ ಮತ್ತು ಮುಂಗಡ ಹಣ ಠೇವಣಿ (ಇ.ಎಂ.ಡಿ) ಮೊತ್ತವು ಅಂತಿಮವಾಗಿರುತ್ತದೆ.

ಹೆಚ್ಚಿನ ವಿವರಗಳಿಗೆ ಸದರಿ ಕಛೇರಿಯಿಂದ ಹಾಗೂ ಹೆಚ್.ಪಿ. ಕಂಪನಿಯ ಸಹಾಯಕ ದೂರವಾಣಿ ಸಂಖ್ಯೆ: 080–22485867 ರಿಂದ ಮಾಹಿತಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರರು
ಪಿ.ಆರ್. 858 ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಭಾಗ, ಚಿತ್ರದುರ್ಗ

**ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ) ಚಿಕ್ಕಬಳ್ಳಾಪುರ**

**ಸಾರ್ವಜನಿಕ ಪ್ರಕಟಣೆ ಸಂಖ್ಯೆ:ಸತೋನಿ(ರಾವ)ಚಿಪುರ:2009–10, ದಿನಾಂಕ: 22ನೇ ಸೆಪ್ಟೆಂಬರ್ 2009**

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆ ತೋಟಗಾರಿಕೆ ಇಲಾಖೆಯ ವತಿಯಿಂದ RKVY ಯೋಜನೆಯಡಿ ಚಿಕ್ಕದಾಸರಹಳ್ಳಿ ಗೋಡಂಬಿ ಮತ್ತು ಮಾವು ಕ್ಷೇತ್ರ ಹಾಗೂ ಪಸಪಲೋಡು ತೋಟಗಾರಿಕೆ ಕ್ಷೇತಗಳಲ್ಲಿ ವಿವಿಧ ಅಭಿವೃದ್ಧಿ (ಪೋಜನಿ ಆರ್ಚರ್ಡ್) ಕೆಲಸ ಕಾರ್ಯಗಳನ್ನು ನಿರ್ವಹಿಸಲು ಲಕೋಟೆ ಟೆಂಡರ್ ದರಗಳನ್ನು ಆಹ್ವಾನಿಸುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ತೋಟಗಾರಿಕೆ ಇಲಾಖೆಯ **KSHDA** ಅಧೀನದ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿಯಲ್ಲಿ ರಾಜ್ಯವಲಯದ ಚಿಕ್ಕದಾಸರಹಳ್ಳಿ ಗೋಡಂಬಿ ಮತ್ತು ಮಾವು ಹಾಗೂ ಪಸಪಲೋಡು ತೋಟಗಾರಿಕೆ ಕ್ಷೇತಗಳಲ್ಲಿ ವಿವಿಧ ಅಭಿವೃದ್ಧಿ (ಪೋಜನಿ ಆರ್ಚರ್ಡ್) ಕೆಲಸ ಕಾರ್ಯಗಳನ್ನು ನಿರ್ವಹಿಸಲು ಲಕೋಟೆ ಟೆಂಡರ್‌ಗಳನ್ನು ಆಹ್ವಾನಿಸಿದೆ. ಇಚ್ಚೆಯುಳ್ಳವರು ಟೆಂಡರ್‌ಗಳನ್ನು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ದಿನಾಂಕ:23–10–2009 ಮಧ್ಯಾಹ್ನ 2–00 ಗಂಟೆ ಒಳಗೆ ನೀಡಲು ಕೋರಿದೆ. ಟೆಂಡರ್‌ಗಳನ್ನು ಅದೇ ದಿನ ಅಂದರೆ 23–10–2009 ರಂದು ಸಂಜೆ 4–00 ಗಂಟೆಗೆ ಕೆಳ ಸಹಿದಾರರ ಕಛೇರಿಯಲ್ಲಿ ತೆರೆಯಲಾಗುವುದು.

| ಕ್ರ. ಸಂ. | ನಿರ್ವಹಿಸಬೇಕಾದ ಕೆಲಸ ಮತ್ತು ಸರಬರಾಜು ಮಾಡಬೇಕಾದ ದಾಸ್ತಾನು ವಿವರ | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ ಮೊತ್ತ |
|---|---|---|---|
| 1. | ಜಿಲ್ಲೆಯಲ್ಲಿರುವ ತೋಟಗಾರಿಕೆ ಕ್ಷೇತ್ರದಲ್ಲಿ ಕಾಡು ಗಿಡಗಳನ್ನು ತೆಗೆದು ಸ್ವಚ್ಚಗೊಳಿಸುವುದು (ದಟ್ಟವಾದ ಕಾಡು / ಸಾಧಾರಣ ಕಾಡು )<br>1) 20 ಹೆ. ಚಿಕ್ಕದಾಸರಹಳ್ಳಿ ಗೋಡಂಬಿ ತೋಟಗಾರಿಕೆ ಕ್ಷೇತ್ರ<br>2) 02 ಹೆ. ಪಸಪಲೋಡು ತೋಟಗಾರಿಕೆ ಕ್ಷೇತ್ರ<br>3) 02 ಹೆ. ಚಿಕ್ಕದಾಸರಹಳ್ಳಿ ಮಾವು ತೋಟಗಾರಿಕೆ ಕ್ಷೇತ್ರ<br>ಒಟ್ಟು 24 ಹೆಕ್ಟೇರ್.<br>ಪ್ರತಿ ಹೆಕ್ಟೇರ್‌ಗೆ ದರ ನಮೂದಿಸುವುದು. | 2.00 | 10000–00 |
| 2. | ಹಣ್ಣಿನ ಗಿಡಗಳನ್ನು ನಾಟಿ ಮಾಡಲು ವಿವಿಧ ಅಳತೆಯ ಗುಂಡಿಗಳನ್ನು ತೆಗೆಯಲು<br>2 ಅಡಿ x 2 ಅಡಿ x 2ಅಡಿ ಅಳತೆಯ 1200 ಗುಂಡಿಗಳು<br>1 ಮೀಟರ್ x 1 ಮೀಟರ್ x 1ಮೀಟರ್ 2400 ಗುಂಡಿಗಳು<br>ಪ್ರತಿ ಗುಂಡಿಗೆ ದರ ನಮೂದಿಸುವುದು. | 1.20 | |
| 3. | ಕಲ್ಟೀವೇಟರ್ ಮತ್ತು ಎಂ.ಬಿ. ನೇಗಿಲು ನಿಂದ ಉಳುಮೆ ಮಾಡುವುದು.<br>24 ಹೆಕ್ಟೇರ್ ಪ್ರತಿ ಹೆಕ್ಟೇರ್ ಗೆ ದರ ನಮೂದಿಸುವುದು. | 1.50 | |
| 4. | ಕೊಟ್ಟಿಗೆ ಗೊಬ್ಬರ 512 ಸಿ.ಎಂ.ಟಿ<br>ಮರಳು 512 ಸಿ.ಎಂ.ಟಿ<br>ಕೆಂಪು ಮಣ್ಣು 512 ಸಿ.ಎಂ.ಟಿ<br>ಪ್ರತಿ ಸಿ.ಎಂ.ಟಿ ಗೆ ದರ ನಮೂದಿಸುವುದು. | 4.52 | |

ಟೆಂಡರ್ ಷೆಡ್ಯೂಲ್: (Tender Schedule)

| ಕ್ರ. ಸಂ | ವಿವರಗಳು | ದಿನಾಂಕ | ಸಮಯ | ಸ್ಥಳ |
|---|---|---|---|---|
| 1 | ಖಾಲಿ ಟೆಂಡರ್ ಫಾರಂಗಳ ವಿತರಣೆ | 12–10–2009 ರಿಂದ 16–10–2009 | ಬೆಳಿಗ್ಗೆ 10–30 ರಿಂದ ಸಂಜೆ 5–00 ಗಂಟೆ | ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ), ನಂದಿ ಕ್ರಾಸ್, ಚಿಕ್ಕಬಳ್ಳಾಪುರ |
| 2 | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | 23–10–2009 | ಮಧ್ಯಾಹ್ನ 2–00 ಗಂಟೆಗೆ | ––ಡಿಟೋ–– |
| 3 | ಟೆಂಡರ್‌ಗಳನ್ನು ತೆರೆಯುವ ದಿನಾಂಕ | 23–10–2009 | ಸಂಜೆ 4–00 ಗಂಟೆಗೆ | ––ಡಿಟೋ–– |

ಷರತ್ತುಗಳು:

1. ಟೆಂಡರ್‌ಗಳನ್ನು ನಿಗದಿಪಡಿಸಿದ ಅವಧಿಯೊಳಗಾಗಿ ಲಕೋಟೆಯಲ್ಲಿ ಸಲ್ಲಿಸಬೇಕು. ನಂತರ ಬಂದ ಟೆಂಡರ್‌ಗಳನ್ನು ಯಾವುದೇ ಕಾರಣಕ್ಕೂ ಅಂಗೀಕರಿಸಲಾಗುವುದಿಲ್ಲ.
2. ಟೆಂಡರ್‌ಗಳನ್ನು ದಿನಾಂಕ:23–10–2009ರಂದು ಹಾಜರಾಗುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
3. ಟೆಂಡರ್‌ಗಳಲ್ಲಿ ಕೆಲಸದ ಪೂರ್ಣ ವಿವರಣೆಯನ್ನು ಹಾಗೂ ಅದರ ದರವನ್ನು ಸ್ಪಷ್ಟವಾಗಿ ನಮೂದಿಸಬೇಕು. ಹಾಗೂ ತಾವು ಹೊಂದಿರುವ ಟಿನ್ ನಂಬರ್ ಹಾಗೂ ಇತರೇ ಆದಾಯ ತೆರಿಗೆ ದಾಖಲಾತಿಗಳನ್ನು ಸಲ್ಲಿಸತಕ್ಕದ್ದು. ಕಳೆದ ಸಾಲಿನಲ್ಲಿ ಆದಾಯ ತೆರಿಗೆ ರಿಟರ್ನ್ಸ್ ಸಲ್ಲಿಸಿದ ವಿವರಗಳನ್ನು ನೀಡುವುದು.
4. ಟೆಂಡರ್ ದರವನ್ನು ಅನುಮೋದಿಸಿದ ಕೂಡಲೇ ಕಾರ್ಯಾದೇಶ ನೀಡಿದ ಒಂದು ವಾರದಲ್ಲಿ ಕೆಲಸ ಮಾಡಿಕೊಡಬೇಕು. ಯಾವುದೇ ಕಾರಣಕ್ಕೂ ಅವಧಿಯನ್ನು ವಿಸ್ತರಿಸುವ ಅವಕಾಶವಿರುವುದಿಲ್ಲ.
5. ಟೆಂಡರ್‌ನಲ್ಲಿ ನಮೂದಿಸಿರುವ ಕೆಲಸ ಕಾರ್ಯಗಳ ಮತ್ತು ಸರಬರಾಜಿನ ಬಗ್ಗೆ ಇರುವ ತೆರಿಗೆಯನ್ನು ಸ್ಪಷ್ಟವಾಗಿ ನಮೂದಿಸಬೇಕು.
6. ಟೆಂಡರ್‌ನಲ್ಲಿ ಮರಳು ಮತ್ತು ಕೆಂಪು ಮಣ್ಣಿಗೆ ಸಂದಾಯಮಾಡಿರುವ ರಾಯಲ್ಟಿ ವಿವರಗಳನ್ನು ನೀಡಬೇಕು. ತಪ್ಪಿದಲ್ಲಿ ಕಾನೂನು ರೀತ್ಯಾ ಲಭ್ಯವಿರುವ ಆದೇಶಗಳನುಸಾರ ರಾಯಲ್ಟಿಯನ್ನು ಬಿಲ್ಲಿನಲ್ಲಿ ನೇರವಾಗಿ ಕಡಿತಗೊಳಿಸಲಾಗುವುದು.
7. ನಿರ್ವಹಣೆ ಮತ್ತು ಸರಬರಾಜಿಗೆ ಸಂಬಂಧಿಸಿದ ಇಲಾಖೆಯ ನಿಯಮಾವಳಿ ಪ್ರಕಾರ ಆದಾಯ ತೆರಿಗೆಯನ್ನು ಬಿಲ್ಲಿನಲ್ಲಿ ಕಟಾಯಿಸಲಾಗುವುದು.
8. ಟೆಂಡರ್‌ಗೆ ಲಗತ್ತಿಸುವ ಇ.ಎಂ.ಡಿಯನ್ನು ಕೆಳ ಸಹಿದಾರರ ಪದನಾಮದಲ್ಲಿ ಪಡೆದಿರಬೇಕು. ಹಾಗೂ ನೀವು ನಿರ್ವಹಿಸುವ ಕಾರ್ಯ ಪೂರ್ಣಗೊಳ್ಳುವ ತನಕ ಮೊತ್ತವನ್ನು ಕಛೇರಿಯಲ್ಲಿ ಕಾದಿರಿಸಲಾಗುವುದು. ಹಾಗೂ ನಿಮ್ಮ ಕಾರ್ಯ ನಿರ್ವಹಣೆ ಮತ್ತು ಸರಬರಾಜಿನಲ್ಲಿ ಯಾವುದೇ ವ್ಯತ್ಯಾಸವಾದಲ್ಲಿ ಇ.ಎಂ.ಡಿ ಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
9. ಟೆಂಡರ್ ಕಮಿಟಿ ತೀರ್ಮಾನದಂತೆ ಇಲಾಖೆಯಿಂದ ಅನುಮೋದಿಸಿದ ಟೆಂಡರ್‌ದಾರರಿಗೆ ಸರಬರಾಜಿಗೆ ಮತ್ತು ಕೆಲಸ ನಿರ್ವಹಿಸಲು ಆದೇಶವನ್ನು ನೀಡಲಾಗುವುದು.
10. ಟೆಂಡರ್ ಪ್ರಕ್ರಿಯೆಯನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಅಧಿಕಾರ ಟೆಂಡರ್ ಕಮಿಟಿಗೆ ಸೀಮಿತಗೊಳಿಸಿದೆ. ಇದರ ಬಗ್ಗೆ ಯಾವುದೇ ಹೆಚ್ಚಿನ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

ಪಿ.ಆರ್. 874 ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಚಿಕ್ಕಬಳ್ಳಾಪುರ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು–575001**

**ಹಳೇ ಕಟ್ಟಡ ಸಾಮಗ್ರಿ ವಿಲೇವಾರಿಗಾಗಿ ಟೆಂಡರು ಹಾಗೂ ಹರಾಜು ಪ್ರಕಟಣೆ**

**ನಂ. ಲೋ.ಬಂ.ಒ.ಜ.ಸಾ.ಇ.:ಮಂ.ವಿ:ಎಇ–2:ಹಳೇಕಟ್ಟಡ ಸಾಮಗ್ರಿ ವಿಲೇವಾರಿ:09–10 ದಿನಾಂಕ: 9ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಪುತ್ತೂರು ಸಹಾಯಕ ಕಮೀಷನರ್ ಕಛೇರಿಯ ಹಳೇ ಕಟ್ಟಡದ ಈ ಕೆಳಕಂಡ ಸಾಮಗ್ರಿಗಳನ್ನು “ಎಲ್ಲಿದೆಯೋ” “ಹೇಗಿದೆಯೋ” ಅದೇ ಸ್ಥಿತಿಯಲ್ಲಿ ವಿಲೇವಾರಿಗಾಗಿ ಮೊಹರು ಮಾಡಿದ ಟೆಂಡರು ಕರೆಯಲಾಗಿದೆ. ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಕಛೇರಿಯಲ್ಲಿ ದಿನಾಂಕ:27.10.2009ರ ಸಂಜೆ 4–00 ಗಂಟೆಯವರೆಗೆ ಸ್ವೀಕರಿಸುವರು.

| ಕ್ರ. ಸಂ. | ಹಳೇ ಕಟ್ಟಡ ಸಾಮಗ್ರಿಗಳ ವಿವರ | | ಠೇವಣಿ (ಟೆಂಡರಿನ ಜೊತೆಗೆ ಡಿ.ಡಿ. ರೂಪದಲ್ಲಿ ಕೊಡ ಬೇಕಾಗಿರುವುದು) ರೂ.ಗಳಲ್ಲಿ | ಟೆಂಡರಿನ ದಾಖಲೆಗಳ ಮೌಲ್ಯ (ಹಿಂದಿರುಗಿಸ ಲಾಗುವುದಿಲ್ಲ) ರೂ.ಗಳಲ್ಲಿ | ಸಾರ್ವಜನಿಕರಿಂದ ಟೆಂಡರು ದಾಖಲೆಗಳಿಗಾಗಿ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಖಾಲಿ ಟೆಂಡರ್ ಫಾರಂ ಗಳನ್ನು ಕೊಡುವ ದಿನಾಂಕ | ಭರ್ತಿ ಗೊಳಿಸಿದ ಟೆಂಡರು ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಸಾರ್ವಜನಿಕ ಹರಾಜಿನ ದಿನಾಂಕ | ಸಾಮಗ್ರಿ ಇರುವ ಸ್ಥಳ |
|---|---|---|---|---|---|---|---|---|---|
| 1 | ಮಂಗಳೂರು ಹಂಚುಗಳು | 8811 ಸಂಖ್ಯೆಗಳು | | | | | | | |
| 2 | ಸಿಲಿಂಗ್ ಹಂಚುಗಳು | 1940 ಸಂಖ್ಯೆಗಳು | | | | | | | |
| 3 | ಪಕ್ಕಾಸು ಹಲಗೆ | 21.257 ಘ.ಮೀ | | | | | | | |
| 4 | ಬೀಮ್ (ತೊಲೆಗಳು) | 3.715 ಘ.ಮೀ | 12000.00 | 1100.00 | 23.10.2009 | 26.10.2009 | 27.10.2009 | 28.10.2009 | ಶಿವರಾಮಕಾರಂತರ ಬಾಲವನ, ಪರ್ಲಡ್ಕ, ಪುತ್ತೂರು |
| 5 | ಲ್ಯಾಟರೇಟು ಕಲ್ಲುಗಳು 3650 ನಂ (1ಘ.ಮೀ. = 70 ಕಲ್ಲು) | 52.14 ಘ.ಮೀ | | | | | | | |
| 6 | ನೆಲಹಾಸು ಹಂಚುಗಳು | 3975 ಸಂಖ್ಯೆಗಳು | | | | | | | |
| 7 | ಮೆಟಲ್ ಜಾಲರಿ ಮೆಶ್ | 41.47 ಚ.ಮೀ | | | | | | | |

**ಸೂಚನೆ:–**

1. ಟೆಂಡರಿನ ನಿಗದಿತ ನಮೂನೆಯನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಮಂಗಳೂರು ಇವರಿಗೆ ಮೇಲೆ ತಿಳಿಸಿರುವ ದಿನಾಂಕದೊಳಗೆ ಕಾಲಂ 4 ರಲ್ಲಿ ನಮೂದಿಸಿರುವ ನಗದು ಪಾವತಿಸಿ ಪಡೆಯಬಹುದು. ಟೆಂಡರು ದಾಖಲೆಗಳನ್ನು ಅಂಚೆಯ ಮೂಲಕ ಕಳುಹಿಸಲಾಗುವುದಿಲ್ಲ.
2. ಖಾಲಿ ಟೆಂಡರು ದಾಖಲೆಗಳನ್ನು ಸಾರ್ವಜನಿಕರಿಂದ ಮನವಿ ಪತ್ರಗಳನ್ನು ದಿನಾಂಕ:23.10.2009 ರ ವರೆಗೆ ಕಾಲಂ 4 ರಲ್ಲಿ ನಮೂದಿಸಿದ ಮೊಬಲಗಿನೊಂದಿಗೆ ಕೆಲಸದ ದಿನಗಳಂದು ಈ ಕಛೇರಿಯಲ್ಲಿ ಕೆಲಸದ ವೇಳೆ ಪಡೆಯಲಾಗುವುದು. ಖಾಲಿ ಟೆಂಡರು ದಾಖಲೆಗಳನ್ನು ದಿನಾಂಕ:26.10.2009 ರಂದು ಕಛೇರಿಯ ಕೆಲಸದ ವೇಳೆ ಪಡೆಯಬಹುದು. ಟೆಂಡರು ದಾಖಲೆಗಳ ಹಣವನ್ನು ಹಿಂದಿರುಗಿಸಲಾಗುವುದಿಲ್ಲ.
3. ಮೊಹರು ಮಾಡಿದ ಭರ್ತಿ ಮಾಡಿದ ಟೆಂಡರು ದಾಖಲೆಗಳನ್ನು ಕಾಲಂ 3 ರಲ್ಲಿ ನಮೂದಿಸಿದ ಮೌಲ್ಯವನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಮಂಗಳೂರು ಇವರ ಹೆಸರಿನಲ್ಲಿ ಡಿ.ಡಿ. ರೂಪದ ಠೇವಣಿ ಸಹಿತ ದಿನಾಂಕ:27.10.2009 ರಂದು ಅಪರಾಹ್ನ 4.00 ಗಂಟೆಯ ವರೆಗೆ ಈ ಕಛೇರಿಯಲ್ಲಿಟ್ಟಿರುವ ಟೆಂಡರು ಡಬ್ಬಿಯಲ್ಲಿ ಹಾಕಬಹುದು. ನಂತರ ಬಂದ ಟೆಂಡರುಗಳನ್ನು ಸ್ವೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಟೆಂಡರುಗಳನ್ನು ಬಹಿರಂಗ ಹರಾಜಿನ ಮುಂದಿನ ದಿನ ದಿನಾಂಕ:29.10.2009 ರಂದು ಕಛೇರಿ ವೇಳೆಯಲ್ಲಿ ಉಪಸ್ಥಿತರಿರುವ ಟೆಂಡರುದಾರರ ಸಮಕ್ಷಮ ತೆಗೆಯಲಾಗುವುದು. ಒಂದು ವೇಳೆ ಮೇಲೆ ತಿಳಿಸಿದ ದಿನಾಂಕದಂದು ನಿಗದಿತ ಸಮಯದಲ್ಲಿ ಟೆಂಡರು ತೆಗೆಯಲು ಸಾಧ್ಯವಾಗದಿದ್ದಲ್ಲಿ ಮುಂದೆ ಅನುಕೂಲವಾಗುವ ದಿನದಂದು ಟೆಂಡರು ತೆಗೆಯಲಾಗುವುದು ಹಾಗೂ ಈ ಬಗ್ಗೆ ಮಾಹಿತಿ ನೀಡಲಾಗುವುದು.
4. ಮೇಲೆ ತಿಳಿಸಿರುವ ದಿನಾಂಕಗಳು ರಜಾ ದಿನಗಳಾದರೆ ಮುಂದಿನ ಕೆಲಸ ದಿನವು ವ್ಯವಹಾರಕ್ಕೆ ಅನ್ವಯಿಸುವುದು.
5. ಯಾವುದೇ ಕಾರಣ ನೀಡದೆ ಟೆಂಡರನ್ನು ಅಂತಿಮವಾಗಿ ಒಪ್ಪುವ ಯಾ ನಿರಾಕರಿಸುವ ಅಥವಾ ಎಲ್ಲಾ ಟೆಂಡರುಗಳನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಹೊಂದಿರುತ್ತಾರೆ.
6. ಅತೀ ಹೆಚ್ಚು ಟೆಂಡರ್ ಬೆಲೆ ನಮೂದಿಸಿದ ವ್ಯಕ್ತಿಯು ಟೆಂಡರನ್ನು ತೆಗೆದ ಮೇಲೆ ಸ್ಥಳದಲ್ಲಿಯೇ ಟೆಂಡರ್ ಬೆಲೆಯ ಶೇಕಡಾ 50 ಮತ್ತು ಸರಕಾರದಿಂದ ನಿಗದಿಪಡಿಸಿರುವ ತೆರಿಗೆಯನ್ನು ಠೇವಣಿಯಾಗಿ ಇಡಬೇಕು ಹಾಗೂ ಟೆಂಡರಿನೊಂದಿಗೆ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಹೆಸರಿನಲ್ಲಿ ಠೇವಣಿ ಮೊತ್ತದ ಡಿ.ಡಿ.ಯನ್ನು ಪಡೆದು ಲಗತ್ತಿಸಿರಬೇಕು. ಇಲ್ಲವಾದಲ್ಲಿ ಅವರ ಟೆಂಡರನ್ನು ನಿರಾಕರಿಸಲಾಗುವುದು.
7. ದಿನಾಂಕ:28.10.2009 ರಂದು ಅಪರಾಹ್ನ 4.30 ಗಂಟೆಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ಪುತ್ತೂರು ಇವರು ಸದರಿಯವರ ಕಛೇರಿಯಲ್ಲಿ ಹಳೆ ಕಟ್ಟಡ ಸಾಮಗ್ರಿಗಳ ವಿಲೇವಾರಿಗಾಗಿ ಸಾರ್ವಜನಿಕ ಹರಾಜನ್ನು ನಡೆಸುತ್ತಾರೆ. ಇದರಲ್ಲಿ ಟೆಂಡರು ಹಾಕಲ್ಪಟ್ಟ ವ್ಯಕ್ತಿಗಳ ಸಹಿತ ಯಾರೂ ಭಾಗವಹಿಸಬಹುದು. ಆದರೆ ಟೆಂಡರ್‌ನಲ್ಲಿ ಭಾಗವಹಿಸದವರು ಮೊದಲು ಕಾಲಂ 3 ರಲ್ಲಿ ನಮೂದಿಸಿದ ಮೌಲ್ಯವನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಮಂಗಳೂರು ಇವರ ಹೆಸರಿನಲ್ಲಿ ಡಿ.ಡಿ. ರೂಪದ ಠೇವಣಿಯಾಗಿಡತಕ್ಕದ್ದು.
8. ಸಾರ್ವಜನಿಕ ಹರಾಜಿನಲ್ಲಿ ಅತಿ ಹೆಚ್ಚು ಬಿಡ್ ಮಾಡಿದ ವ್ಯಕ್ತಿಯು ಬಿಡ್ ಮೌಲ್ಯದ ಶೇಕಡಾ 50 ಮತ್ತು ಸರಕಾರದಿಂದ ನಿಗದಿಪಡಿಸಿರುವ ತೆರಿಗೆಯನ್ನು ಸ್ಥಳದಲ್ಲಿಯೇ ಠೇವಣಿಯಾಗಿಡಬೇಕು.
9. ಅತೀ ಹೆಚ್ಚಿನ ಟೆಂಡರ್ ಮೊತ್ತದ ಬಿಡ್ಡುದಾರರ ಬಿಡ್ಡಿನ ಮೊತ್ತವನ್ನು ಮೇಲಾಧಿಕಾರಿಯವರಿಂದ ಅನುಮೋದನೆ ಪಡೆದ ನಂತರ ಮೇಲಿನ ಹಳೇ ಕಟ್ಟಡ ಸಾಮಗ್ರಿಗಳನ್ನು ವಿಲೇವಾರಿ ಮಾಡಲಾಗುವುದು.
10. ಆಸಕ್ತರು ಸಹಾಯಕ ಕಾರ್ಯಪಾಲಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪವಿಭಾಗ, ಪುತ್ತೂರು ಇವರನ್ನು ಸಂಪರ್ಕಿಸಿ, ಮೇಲಿನ ಸಾಮಗ್ರಿಗಳನ್ನು ಕಛೇರಿ ಸಮಯದಲ್ಲಿ ಪರಿಶೀಲಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
ಮಂಗಳೂರು ವಿಭಾಗ, ಮಂಗಳೂರು

ಪಿ.ಆರ್. 871

**DISTRICT AND SESSIONS COURT, BANGALORE RURAL DISTRICT, BANGALORE**
**NOTIFICATION**
**NOS: ADM/133/2009 & ADM/164/2009, Dated: 6th October 2009**

Applications are invited for the following Posts in the units of District & Sessions Court, Bangalore Rural District, Bangalore from the eligible candidates. The last date fixed for receiving the application is **26.10.2009 at 4.00 P.M.** The details are as under:-

**1. PROCESS SERVER**

**Total number of vacancies is 04 (Four)**

**Classification of vacancies:-**

| Category of post | Others | P.H. | Ex. M.P. | Total |
|---|---|---|---|---|
| G.M. | - | 1 | 1 | 2 |
| S.T. | 1 | - | - | 1 |
| Cat. II A | 1 | - | - | 1 |
| **Total** | **2** | **1** | **1** | **4** |

**Pay scale:** 5500-100-6000-125-6500-150-7100-175-7800-200-8600-225-9500

**Qualification:** A pass in SSLC or equivalent examination.

Preference will be given to the candidates possessing driving licence.

**Mode of selection:** Oral interview.

**2. PEONS**

**No. of vacancies-10**

**Classification of vacancies**

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ | ಮಾಜಿ ಸೈನಿಕ | ಒಟ್ಟು |
|---|---|---|---|---|---|
| ಸಾಮಾನ್ಯ ಅರ್ಹತೆ (General Merit) | 01 | 01 | 02 | 01 | 05 |
| ಪರಿಶಿಷ್ಟ ಜಾತಿ (S.C.) | – | – | 01 | – | 01 |
| ಪರಿಶಿಷ್ಟ ಪಂಗಡ (S.T.) | – | – | 01 | – | 01 |
| ಪ್ರವರ್ಗ – 1 (Cat.I) | – | 01 | – | – | 01 |
| ಪ್ರವರ್ಗ – 2ಎ (Cat.II-A) | – | – | 01 | – | 01 |
| ಪ್ರವರ್ಗ – 3ಬಿ (Cat. III-B) | – | 01 | – | – | 01 |
| **ಒಟ್ಟು** | **01** | **03** | **05** | **01** | **10** |

**Pay scale:**

4800-100-6000-125-6500-150-7100-175-7275.

**Qualification:** A pass in VII Standard and must be able to read and write Kannada

**Mode of selection:** Oral interview.

**AGE LIMIT FOR ALL THE ABOVE POSTS**

(i) The applicant must have attained the age of 18 years and must not have attained the age of

a) 40 years in case of persons belonging to SC/ST and Category-I

b) 38 years in case of other categories of Backward classes.

c) 35 years in case of others

as on the last date fixed for submission of application.

d) Age relaxation will be given to the applicant who is in State/Central Govt. Service/ Ex.M.P./P.H./Widow as per the KCS (General Recruitment) Rules, 1977

The application in the prescribed proforma as per the respective notifications to be submitted to the District & Sessions Judge, Bangalore Rural District, Bangalore on or before 26.10.2009

For application formats and further details, refer the notification affixed on the Notice board of this office.

Bangalore
Dated:06.10.2009.
P.R. 876

**K. GOVINDARAJULU**
Prl. District & Sessions Judge,
Bangalore Rural District, Bangalore

## ಲೋಕೋಪಯೋಗಿ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಪ್ರಕಟಣೆ (ದ್ವಿಲಕೋಟೆ ಪದ್ಧತಿ) – 4ನೇ ಕರೆ**

**ಸಂಖ್ಯೆ:ಲೋ.ಇ.ಮಂವಿ:ಟಿಎನ್‌ಡಿ(33ಇ):2009–10:ಎಇ1, ದಿನಾಂಕ: 12ನೇ ಅಕ್ಟೋಬರ್ 2009**

ಈ ಕೆಳಕಂಡ ಕಾಮಗಾರಿಗಳ ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಆನ್‌ಲೈನ್‌ನಲ್ಲಿ ಸಲ್ಲಿಸುವ ದಿನಾಂಕವನ್ನು 26.10.2009ರ ಅಪರಾಹ್ನ 4.00 ಗಂಟೆ (16.00 ಗಂಟೆ) ಎಂದು ಮರುನಿಗದಿಪಡಿಸಲಾಗಿದೆ. ಉಳಿದಂತೆ ಯಾವುದೇ ಬದಲಾವಣೆಗಳು ಇರುವುದಿಲ್ಲ. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಅಂತರ್ಜಾಲದಲ್ಲಿ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಲಕ್ಷಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಹೊರತುಪಡಿಸಿ) |
|---|---|---|---|---|
| | **ನಬಾರ್ಡ್ ಆರ್.ಐ.ಡಿ.ಎಫ್–14 (ರಸ್ತೆಗಳು)** | | | |
| 1 | ಸುಳ್ಯ ತಾಲ್ಲೂಕಿನ ಐವರನಾಡು–ಪಾಲೆಪ್ಪಾಡಿ ಅಮಲ ರಸ್ತೆ ಅಭಿವೃದ್ಧಿ | 69.00 | 1.38 | 9 ತಿಂಗಳು |
| 2 | ಸುಳ್ಯ ತಾಲ್ಲೂಕಿನ ನರಕೋಡು–ಕೊಲ್ಚಾರು–ಬಂಡ್ಯಡ್ಕ ರಸ್ತೆ ಅಭಿವೃದ್ಧಿ | 95.00 | 1.90 | 9 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 882 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ:ಬಿ1/ಎಸ್.ಎ.ಎಸ್.ಸಿಆರ್.3/2009–10, ದಿನಾಂಕ: 6ನೇ ಅಕ್ಟೋಬರ್ 2009**

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ತರೀಕೆರೆ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ನಾಟಾಗಳನ್ನು ಅನುಸೂಚಿಯಲ್ಲಿ ಸೂಚಿಸಿರುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಇವರಿಂದ ಅಧಿಕಾರ ಪಡೆದ ಇತರೆ ಅಧಿಕಾರಿಗಳು ದಿನಾಂಕ: 04.11.2009 ರ ಬೆಳಿಗ್ಗೆ 10.00 ಗಂಟೆಗೆ ಈ ಕೆಳಗೆ ನಮೂದಿಸಿದ ಷರತ್ತಿಗೊಳಪಟ್ಟು ಹಾಗೂ ಸವಿಸ್ತಾರ ಹರಾಜು ಪ್ರಕಟಣೆ ನಿಬಂಧನೆಗಳ ಪ್ರಕಾರ ಬಹಿರಂಗ ಹರಾಜು ಮಾಡುವರು.

| ಕ್ರ. ಸಂ. | ಜಾತಿ | (ಅಂದಾಜು ಪ್ರಮಾಣ) |
|---|---|---|
| 1 | ಬೀಟೆ | 25.000 ಎಂ3 |
| 2 | ಸಾಗುವಾನಿ | 30.000 ಎಂ3 |
| 3 | ಜಂಗಲ್ ವುಡ್ | 60.000 ಎಂ3 |
| 4 | ಪೋಲ್ಸ್ | 250 ಸಂಖ್ಯೆ |

**ಷರತ್ತುಗಳು**

1. ನಾಟಾ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು 20,000/– ರೂ. ಮೌಲ್ಯದ ಮರ ಖರೀದಿಗೆ ಕನಿಷ್ಟ 5000/– ರೂ.ಗಳನ್ನು ಮತ್ತು ರೂ.20,000/– ಮೀರಿದ ಮೌಲ್ಯಕ್ಕೆ 20,000/– ರೂ.ಗಳನ್ನು ಮುಂಗಡ ಠೇವಣಿಯಾಗಿ ಕಟ್ಟಬೇಕು.
2. ಹರಾಜಿನ ದಿನವೇ ಒಟ್ಟು ಹರಾಜಿನ ಮೌಲ್ಯದ ಕಾಲುಭಾಗ ಹಣ ಮತ್ತು ಅನ್ವಯಿಸುವ ಎಲ್ಲಾ ತೆರಿಗೆಗಳನ್ನು ಕೆಳಕಂಡಂತೆ ಅಥವಾ ಹರಾಜಿನ ದಿನದಂದು ಚಾಲ್ತಿಯಲ್ಲಿರುವಂತೆ ಪೂರ್ಣವಾಗಿ ಪಾವತಿಸಬೇಕು. ಉಳಿದ ಮುಕ್ಕಾಲು ಭಾಗ ಹಣವನ್ನು ಹರಾಜು ದಿನಾಂಕದಿಂದ 60 ದಿನಗಳೊಳಗೆ ಪಾವತಿಸಿ 90 ದಿನಗಳಲ್ಲಿ ಮಾಲು ಎತ್ತುವಳಿ ಮಾಡಬೇಕು.

ಅ. ಟಿಂಬರ್, ಪೋಲ್ಸ್ ಆರ್.ಕೆ. ಬಿಲ್ಲೆಟ್ಸ್ ವ್ಯಾಟ್ 12.5%

ಆ. ಎಫ್.ಡಿ.ಟಿ.= 8% ಇತರೆಯವರಿಗೆ, 12% ಕೈಗಾರಿಕೆಗಳಿಗೆ

ಇ. ಆದಾಯ ತೆರಿಗೆ=2.5% ಮೌಲ್ಯ ವ್ಯಾಟ್ ಮತ್ತು ಎಫ್.ಡಿ.ಟಿ. ಮೇಲೆ

ಈ. ಸರ್ಚಾರ್ಜ್=2.5% ಆದಾಯ ತೆರಿಗೆ ಮೇಲೆ

ಉ. ಎಜುಕೇಷನ್ ಸೆಸ್ 3% ಆದಾಯ ತೆರಿಗೆ ಮತ್ತು ಸರ್ಚಾರ್ಜ್ ಮೇಲೆ

3. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಠೇವಣಿ ಕಟ್ಟುವ ಮೊದಲು ಚುನಾವಣಾಧಿಕಾರಿಗಳು ನೀಡಿರುವ ಗುರುತಿನ ಚೀಟಿ ಅಥವಾ ಆಹಾರ ಪಡಿತರ ಚೀಟಿ ಅಥವಾ ಡ್ರೈವಿಂಗ್ ಪರವಾನಿಗೆ ಇವುಗಳಲ್ಲಿ ಯಾವುದಾದರೂ ಒಂದು ಗುರುತಿನ ಚೀಟಿ ಹಾಜರುಪಡಿಸತಕ್ಕದ್ದು.
4. ಇತರೆ ಷರತ್ತುಗಳನ್ನು ಕಛೇರಿಯಿಂದ ಅಥವಾ ಸಂಬಂಧಪಟ್ಟ ಡಿಪೋ ವಲಯ ಅರಣ್ಯಾಧಿಕಾರಿ ಯವರ ಕಛೇರಿಯಿಂದ ಪಡೆಯಬಹುದಾಗಿದೆ.
5. ಟ್ಯಾನ್ ಮತ್ತು ಟಿನ್ ಸಂಖ್ಯೆಗಳನ್ನು ಸಂಬಂಧಿಸಿದ ಆದಾಯ ತೆರಿಗೆ ಮತ್ತು ವಾಣಿಜ್ಯ ತೆರಿಗೆ ಅಧಿಕಾರಿಗಳಿಂದ ಕಡ್ಡಾಯವಾಗಿ ಪಡೆದು ಹರಾಜು ಭಾಗವಹಿಸುವ ಪೂರ್ವ ಹಾಜರುಪಡಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ

**BHADRAVATHI FOREST DIVISION**

**Office of the Deputy Conservator of Forests, Bhadravathi Division, Bhadravathi**

**BRIEF SALE NOTIFICATION**

**No.B1.SAS.CR. 3/2009-10, Dated: 6th October 2009**

**Sub:** Auction sale of Timber and other forest produce in Govt. Timber Depot. Tarikere on 04.11.2009.

**Ref:** No.B4.SAS.ಬಿಹ–CR.6/099-10 dtd: 06.10.2009 of the Conservator of Forests, Shimoga Circle, Shimoga.

It is hereby notified for the general information of the public that the Timber and other forest produce as detailed here below will be sold in the Government Timber Depot. Tarikere in public auction on 04.11.2009 from 10.00 A.M. by the Deputy Conservator of Forests, Bhadravathi Division, Bhadravathi or the authorized officer subject to conditions to the detailed sale notifications.

| Sl. No. | Species | Approximate quantity |
|---|---|---|
| 1 | Beete | 25.000 m3 |
| 2 | Teak | 30.000 m3 |
| 3 | Jungle wood | 60.00 m3 |
| 4 | Poles | 250 Nos |

**CONDITIONS**

1. Each intending bidders should deposit a sum of Rs.5,000/- if value of timber does not exceed Rs.20,000/- & Rs.20,000/- if exceeds, Rs.20,000/- as EMD.
2. Each bidders should pay 1/4th sale value plus full taxes at the rates given below or at the prevailing rates in force on the sale date immediately after conclusion of the sale. The remaining 3/4th value should be paid within 60 days from the date of sale. Material should be lifted within 90 days from the date of sale.
   a) VAT-12.5% b) FDT-for other than industries 8% for industries. 12% c) Income Tax 2.5% on value, VAT & FDT d) SC on IT 2.5% e) Education cess 3% on IT & Sc.
3. Each intending bidder should produce identity card issued by the Election Commissioner or Ration Card or Driving License. Otherwise the bidder will not be allowed to participate in the sale.
4. Further details can be had from the division office or the concerned depot office.
5. Each intending bidder should produce TAN and TIN No. allotted by Income Tax & Vat Officers.

Deputy Conservator of Forests,

P.R. 883 Bhadravathi Division, Bhadravathi

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ:ಬಿ1/ಎಸ್.ಎ.ಎಸ್.ಸಿಆರ್–21/2009–10, ದಿನಾಂಕ: 6ನೇ ಅಕ್ಟೋಬರ್ 2009**

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ರಾಜ್ಯ ಹೆದ್ದಾರಿ 68 ರ ತುಮಕೂರು–ಹೊನ್ನಾವರ ರಸ್ತೆಯ ಬಾರಂದೂರು ಕ್ರಾಸ್‌ನಿಂದ ಅಪ್ಪರ್ ಹುತ್ತಾದವರೆಗಿನ ರಸ್ತೆಯ ಎರಡು ಬದಿಯಲ್ಲಿರುವ ಇತರೆ ಜಾತಿಯ ಮರಗಳನ್ನು ಅನುಸೂಚಿಯಲ್ಲಿ ಸೂಚಿಸಿರುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಇವರಿಂದ ಅಧಿಕಾರ ಪಡೆದ ಇತರೆ ಅಧಿಕಾರಿಗಳು ದಿನಾಂಕ: 9.11.2009 ರ ಬೆಳಿಗ್ಗೆ 10.00 ಗಂಟೆಗೆ ಈ ಕೆಳಗೆ ನಮೂದಿಸಿದ ಷರತ್ತಿಗೊಳಪಟ್ಟು ಹಾಗೂ ಸವಿಸ್ತಾರ ಹರಾಜು ಪ್ರಕಟಣೆ ನಿಬಂಧನೆಗಳ ಪ್ರಕಾರ ನಿಂತ ಸ್ಥಳದಲ್ಲೇ ಇರುವಂತೆ ಬಹಿರಂಗ ಹರಾಜು ಮಾಡುವರು.

| ಕ್ರ. ಸಂ. | ರಸ್ತೆ ವಿವರ | ಮರಗಳ ಸಂಖ್ಯೆ | ಮರದ ಪ್ರಮಾಣ (ಘ.ಮೀ.ಗಳಲ್ಲಿ) |
|---|---|---|---|
| | | | ನಾಟಾ |
| 1 | ಶಿವನಿಕ್ರಾಸ್–ಬಾರಂದೂರು ಎಡಭಾಗದ ಬೈಪಾಸ್ | 79 | 29.924 |
| 2 | ಶಿವನಿಕ್ರಾಸ್‌ನ ಬಲಭಾಗ | 78 | 28.998 |
| 3 | ಶಿವನಿಕ್ರಾಸ್–ಅಪ್ಪರ್ ಹುತ್ತಾ ಎಡಭಾಗ | 67 | 11.143 |
| 4 | ಶಿವನಿಕ್ರಾಸ್ ಅಪ್ಪರ್ ಹುತ್ತ ಬಲಭಾಗ | 53 | 9.117 |
| | **ಒಟ್ಟು** | **277** | **79.182** |

ವಿವರವಾದ ಹರಾಜು ಷರತ್ತುಗಳನ್ನು ಈ ಕೆಳಸಹಿದಾರರ ಕಛೇರಿಯಿಂದ ಹರಾಜಿಗೆ ಮುನ್ನ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ

**BHADRAVATHI FOREST DIVISION**

**Office of the Deputy Conservator of Forests, Bhadravathi Division, Bhadravathi**

**BRIEF SALE NOTIFICATION**

**No.B1.SAS.CR.21/2009-10, Dated: 6th October 2009**

**Sub:** Auction sale of Standing Trees along the State High Way 68 of Bhadravathi Taluk, Shimoga District of Karnataka State from Tumkur-Honnavara Road Barandur cross to Upper Hutha.

It is hereby notified for the general information of the public that the trees Standing along the State High Way 68 of Bhadravathi Taluk, Shimoga District of Karnataka State from Tumkur-Honnavara Road Barandur cross to Upper Hutha will be sold in public auction on 9.11.2009 at 10.00 A.M. by the Deputy Conservator of Forests, Bhadravathi Division, Bhadravathi or the authorized officer subject to conditions mentioned in the detailed sale notification.

| Sl. No. | Road Details | No. of Standing trees | Standing trees qnty in M3 |
|---|---|---|---|
| | | | Timber |
| 1. | Shivani cross to Barandur bypass road left side | 79 | 29.924 |
| 2. | Shivani cross right side | 78 | 28.998 |
| 3. | Shivani cross-Upper Hutha left side | 67 | 11.143 |
| 4. | Shivani cross Upper-Hutha right side | 53 | 9.117 |
| | **Total** | **277** | **79.182** |

The detailed sale conditions can be obtained from the office of the Deputy Conservator of Forests, Bhadravathi Division on any date on or before the sale date.

Deputy Conservator of Forests,
Bhadravathi Division, Bhadravathi

P.R. 884

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಅಧಿಸೂಚನೆ

**ಸಂಖ್ಯೆ: ಎ4–ನಾಟಾ ಹರಾಜು:ಸಿಆರ್–16/09–10, ದಿನಾಂಕ: 2ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ, ಅಕೇಶಿಯಾ ಇತರೆ ಜಾತಿಯ ನಾಟಾಗಳು ಎಳೆಗಳು ಮತ್ತು ಸೌದೆ ಇತ್ಯಾದಿಗಳನ್ನು ಆಯಾ ಡಿಪೋವಿನ ಹೆಸರಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗೆ ಪ್ರಕಟಿಸಿದೆ.

| ಕ್ರ. ಸಂ. | ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ, ಪೋಲ್ಸ್, ಸೌದೆ, ಬಿಲ್ಲೆಟ್ಸ್ ಇತ್ಯಾದಿ ಅಂದಾಜು ಪ್ರಮಾಣ | | | | | | | | | | | | |
|---|---|---|---|---|---|---|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಇತರೆ ಜಾತಿ | ಅಕೇಶಿಯಾ | ಪೋಲ್ಸ್ | ನೀಲಗಿರಿ | ಎಫ್.ಓ.ಸಿ. | | | | | | |
| | | | | | | | | | ಬೀಟೆ | ಸಾಗುವಾನಿ | ಇತರೆ ಜಾತಿ | ಅಕೇಶಿಯಾ | ಸೌದೆ | ಪೋಲ್ಸ್ | ಕಲ್ಲು |
| | | | ಘ.ಮೀ. | ಘ.ಮೀ. | ಘ.ಮೀ. | ಘ.ಮೀ. | ಸಂಖ್ಯೆ | ಘ.ಮೀ. | ಘ.ಮೀ. | ಘ.ಮೀ. | ಘ.ಮೀ. | ಘ.ಮೀ. | ಘ.ಮೀ. | ಘ.ಮೀ. | ಸಂಖ್ಯೆ |
| 1 | ಸರ್ಕಾರಿ ನಾಟಾ ಡಿಪೋ ಆಲ್ಕೊಳ ಶಿವಮೊಗ್ಗ | 02.11.09 | ನಾಟಾ (ಖಾಸಗಿ) 9.000 ಆರ್.ಕೆ.ಬಿ (ಖಾಸಗಿ) 1.000 ಸೌದೆ (ಖಾಸಗಿ) 5.000 | – | ನಾಟಾ 1.300 | ನಾಟಾ 390.000 ಸೌದೆ 1250.000 | 2000 (ಅಕೇಶಿಯಾ) 100 (ನೀಲಗಿರಿ) | 100.0000 ನಾಟಾ 50.000 ಸೌದೆ | – | – | – | – | – | – | |
| 2 | ಸರ್ಕಾರಿ ನಾಟಾ ಡಿಪೋ ಕುರುವಳ್ಳಿ ತೀರ್ಥಹಳ್ಳಿ | 03.11.09 | ನಾಟಾ 0.511 | ನಾಟಾ 0.658 | ನಟಾ 5.940 | – | – | – | – | ನಾಟಾ 1.800 | ನಾಟಾ 5.999 | ನಾಟಾ 17.000 | 7.000 | – | 67 ಟನ್ನು |

**ಟಿಪ್ಪಣಿ:** 1. ಈ ಮೇಲಿನ ಸರಕು ಪ್ರಮಾಣ ಅಂದಾಜು ಇರುತ್ತದೆ.

2. ಮಾರಾಟದ ಅಧಿಸೂಚನೆಯ ಪ್ರತಿಗಳಿಗಾಗಿ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಸಂಪರ್ಕಿಸುವುದು.

**ಎಸ್. ವೆಂಕಟೇಸನ್**

ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## FOREST DEPARTMENT

**Office of the Deputy Conservator of Forests, Shimoga Division, Shimoga**

**Notification**

**No. A4-SAS-CR-16/2009-10, Dated: 2nd October 2009**

It is hereby notified for the information of general public that Beete, Acacia Other Kind Timber, Poles, Ballies and Firewood etc, available in the following Govt. Timber Depots of Shimoga division will be sold in Public Auction on the dates shown against each depot.

| Sl. No. | Name of the Depot | Date of sale | Beete | Teak | Other kind | Acacia | Poles | Eucaly-ptus | F O C | | | | | | |
|---|---|---|---|---|---|---|---|---|---|---|---|---|---|---|---|
| | | | | | | | | | Beete | Teak | O.K | Acacia | F/W | Poles | Stones |
| | | | M3 | M3 | M3 | M3 | M3 | Nos. | M3 | M3 | M3 | M3 | M3 | | |
| 1 | GTD, Alkola, Shimoga | 02.11.09 | Timber (Pvt) 9.000 RKB(Pvt) 1.000 (F/wood) (Pvt) 5.000 | - | Timber 1.300 | Timber 390.000 F/wood 1250.000 | 2000 (Acacia) 100 (Eucalyptus) | Timber 100.0000 Firewood 50.000 | - | - | | - | - | - | |
| 2 | GTD Kuruvalli, Thirthahalli | 03.11.09 | Timber 0.511 | Timber 0.658 | Timber 5.940 | - | - | - | - | Timber 1.800 | Timber 5.999 | Timber 17.000 | 7.000 | - | 67 Tonn |

**Note:** 1. Quantities shown above are approximate.

2. For detailed sale notification please contact the concerned Deputy Conservator of Forests, during office hours except Govt. holidays.

**S. VENKATESHAN**

Deputy Conservator of Forests,

Shimoga Division, Shimoga.

P.R. 885

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಇಡಿ 210 ಡಿಸಿಇ 2008(10), ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2009**

ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಅರ್ಜಿಗಳನ್ನು ಆಹ್ವಾನಿಸಿ ನೇಮಕಾತಿ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದುದು ಸರಿಯಷ್ಟೆ. ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಪ್ರಕ್ರಿಯೆಯನ್ನು ಪೂರೈಸಿ ತದನಂತರ ಮತ್ತು ಆಯೋಗವು ಸಲ್ಲಿಸಿದ ಆಯ್ಕೆ ಪಟ್ಟಿಯಂತೆ ಈ ಕೆಳಕಂಡ ಅಭ್ಯರ್ಥಿಯ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ವಾಣಿಜ್ಯಶಾಸ್ತ್ರ ಉಪನ್ಯಾಸಕರ ಹುದ್ದೆಗಳಿಗೆ 02 ವರ್ಷಗಳ ಪರಿವೀಕ್ಷಣಾ ಅವಧಿಯ ಮೇರೆಗೆ ವೇತನ ಶ್ರೇಣಿ ರೂ.8000–275–13500 ರಲ್ಲಿ ಈ ಮೂಲಕ ನೇಮಕಾತಿ ಮಾಡಲಾಗಿದೆ.

**ವಾಣಿಜ್ಯಶಾಸ್ತ್ರ**

| | | | | | | |
|---|---|---|---|---|---|---|
| 1 | 344 | ಜೈಶೀಲಾ D/o ಬಾಬುರಾವ್, ಮನೆ ನಂ.8–5–253, ಲೇಬರ್ ಕಾಲೋನಿ, ಷಹಾಗುಂಜ್, ಬೀದರ್–585401. | | | | M.Phil - Gul |

ಮೇಲ್ಕಂಡ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಈ ಅಧಿಸೂಚನೆಯಲ್ಲಿರುವ ಅಭ್ಯರ್ಥಿ ಕಾಲೇಜು ಶಿಕ್ಷಣ ಆಯುಕ್ತರು ಸ್ಥಳನಿಯುಕ್ತಿ ಆದೇಶ ನೀಡುವ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗ ಆಯ್ಕೆ ಮಾಡಿರುವ ಜ್ಯೇಷ್ಠತೆಯಂತೆಯೇ ಪರಿಗಣಿಸಿ ಕೌನ್ಸಿಲಿಂಗ್ ಮಾಡುವುದು. ಈ ಸಂಬಂಧ ಆಯುಕ್ತರ ಕಾರ್ಯಾಲಯವು ಕೌನ್ಸಿಲಿಂಗ್ ದಿನಾಂಕವನ್ನು ತಿಳಿಸುತ್ತದೆ.
2. ನೇಮಕಾತಿಯು ತಾತ್ಕಾಲಿಕವಾಗಿದ್ದು ಆಗ್ಗಿಂದಾಗ್ಗೆ ಈ ಸಂಬಂಧ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3. ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ನಡತೆ, ಮೀಸಲಾತಿಗೆ ಸಂಬಂಧಿಸಿದ ಮತ್ತಿತರ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಪ್ರಥಮವಾಗಿ ಆಯುಕ್ತರ ಮುಂದೆ ಹಾಜರುಪಡಿಸಿ ಪರಿಶೀಲನೆಯ ನಂತರ ಈ ದಾಖಲಾತಿಗಳನ್ನು ಹಾಜರಾಗುವ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4. ಕರ್ನಾಟಕ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ (1974)ರ ಅಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5. ಪಿಹೆಚ್.ಡಿ / ಎನ್.ಇ.ಟಿ / ಎಸ್.ಎಲ್.ಇ.ಟಿ ಪರೀಕ್ಷೆ ತೇರ್ಗಡೆ ಹೊಂದಿದ್ದವರು ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ, ಭಾಗ–1 ಮತ್ತು ಭಾಗ–2 ಇದನ್ನು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆಯಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
6. ಪಿಹೆಚ್.ಡಿ/ ಎನ್.ಇ.ಟಿ / ಎಸ್.ಎಲ್.ಇ.ಟಿ ಪದವಿ ಇಲ್ಲದವರು ಅಂದರೆ ಕೇವಲ ಎಂ.ಫಿಲ್ ಪಾಸು ಮಾಡಿರುವವರು (ದೂರ ಶಿಕ್ಷಣ ಮುಖೇನ ಅಥವಾ ಸಾಂಪ್ರದಾಯಿಕ ಶಿಕ್ಷಣದ ಮುಖೇನ) ಪರಿವೀಕ್ಷಣಾ ಅವಧಿಯಲ್ಲಿ ಎನ್.ಇ.ಟಿ/ಎಸ್.ಎಲ್.ಇ.ಟಿ, / ಪಿ.ಹೆಚ್.ಡಿ.ಯಲ್ಲಿ ಮೇಲ್ಕಾಣಿಸಿದ ಇಲಾಖಾ ಪರೀಕ್ಷೆಗಳ ಜೊತೆಗೆ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
7. ಉಪನ್ಯಾಸಕ ಹುದ್ದೆಗೆ ಅವಶ್ಯಕತೆ ಇರುವ ಓರಿಯೆಂಟೇಷನ್ ಮತ್ತು ರಿಫ್ರೆಷರ್ ಕೋರ್ಸ್ ತರಬೇತಿಯನ್ನು ಪೂರೈಸತಕ್ಕದ್ದು.
8. ಅಭ್ಯರ್ಥಿಯ ಜೇಷ್ಠತೆಯು ಕರ್ನಾಟಕ ಲೋಕ ಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಅಧಿಸೂಚನೆಯನ್ವಯ ಇರತಕ್ಕದ್ದು.
9. ಅಭ್ಯರ್ಥಿಯ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
10. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಈ ಕುರಿತು ಬಾಕಿ ಇರುವ ಅರ್ಜಿ ಸಂಖ್ಯೆ: 5502/2008 ಮತ್ತು 2365/2009ರ ಮೇಲೆ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು. ಹಾಗೂ ಈ ತೀರ್ಪುಗಳ ಕುರಿತಾದ ಉಚ್ಚ ನ್ಯಾಯಾಲಯದ ಮೇಲ್ಮನವಿ ತೀರ್ಪಿಗೆ ಬದ್ಧರಾಗಿರತಕ್ಕದ್ದು.
11. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವರ್ಗಾವಣೆ ಪರಿಗಣಿಸಲಾಗುವುದಿಲ್ಲ.
12. ಈ ಅಧಿಸೂಚನೆಯಲ್ಲಿ ಕಾಣಿಸಿರುವ ಅಭ್ಯರ್ಥಿಯ ಸಂಬಳ, ಭತ್ಯೆ ಇತ್ಯಾದಿ ಇವುಗಳು ಸ್ಥಳನಿಯುಕ್ತಿ ಆದೇಶ ಹೊರಡಿಸಿ ಅದರಂತೆ ಆಯಾ ಸ್ಥಳಗಳಲ್ಲಿ ಹಾಜರಾದ ದಿನಾಂಕದಿಂದ ಲಭ್ಯವಾಗುತ್ತದೆ.

ಅಭ್ಯರ್ಥಿಗಳು ಅಂದರೆ ಪಿ.ಹೆಚ್‌ಡಿ/ಎನ್.ಇ.ಟಿ/ಎಸ್.ಎಲ್.ಇ.ಟಿ ಪದವಿ ಹೊಂದಿರುವವರು ಕನ್ನಡ ಭಾಷೆ, ಅಕೌಂಟ್ಸ್ ಹೈಯರ್ ಹಾಗೂ ಜನರಲ್ ಲಾ ಭಾಗ–1 ಮತ್ತು ಭಾಗ–2 ಇವುಗಳಲ್ಲಿ ತೇರ್ಗಡೆ ಹೊಂದಿದ ನಂತರವೆ ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲು ಅರ್ಹರಿರುತ್ತಾರೆ; ಅಂತೆಯೇ ಕೇವಲ ಎಂ.ಫಿಲ್ ಪದವಿ ಪಡೆದವರು ಈ

